# ಸಪ್ತಗಿರಿ

ಬೆಲೆ: ರೂ ೧



ಫೆಬ್ರುವರಿ 1987.

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ

JAGADISH



ಬಾರಯ್ಯ ವೆಂಕಟರಮಣ ॥ ಪ ॥

ಬಾರಯ್ಯ ವೆಂಕಟರಮಣ ನೀನೆನಗೆ
ಧಾರುಣಿಯೊಳು ನಿನ್ನ ಮೂರುತಿ ತೋರುತ ॥ ಅ.ಪ ॥

ಮನವೆಂಬ ಮಂಟಪ ನಿನಗೆ ಹಾಕಿಎನ್ನ
ತನುವನೊಪ್ಪಿಸಿ ಕೈಯ್ಯ ಮುಗಿವೆನಯ್ಯ
ವನಜಜ ಭವ ಸುರ ಮುನಿಗಳು ಭಜಿಸುವ
ಘನಮಹಿಮನೆ ಪಾದಕೆರಗಲೆನ್ನ ಶಿರ ॥ 1 ॥

ಲಿಂಗದೇಹವೆಂಬ ಪವಳಿ ಸಿಂಗರಿಸಿ
ಅಂಗವ ನಿನಗೆ ಕಾಣಿಕೆಯು ನೀಡುವೆ
ಮಂಗಳ ಮೂರುತಿ ಅಂಗನೆಸಹಿತ ಭು
ಜಂಗಶಯನ ಎನ್ನ ಕಂಗಳಿಗುತ್ಸವವೀಯೊ ॥ 2 ॥

ಕಡಗ ಕಿರುಗೆಜ್ಜೆ ಪೆಂಡೆಗಳಿಂದೊಪ್ಪುವ
ಉಡುಗೆ ಪೀತಾಂಬರ ತರಳಕೌಸ್ತುಭ
ಪಿಡಿದ ಶಂಖಚಕ್ರ ಕರ್ಣ ಕುಂಡಲಗಳಿಂದ
ಕಡಲಶಯನ ಎನ್ನ ಹೃದಯದೊಳಗೆ ನಿಲ್ಲೊ ॥ 3 ॥

ಒಡೆಯ ನೀನೆನಗೆ ಅನಾದಿಕಾಲದಿಂದ
ಬಡವನು ನಾನಿನ್ನ ದಾಸನಯ್ಯ
ಕಡುಕರುಣದಿಂದ ದಾಸತ್ವ ನೀಡು ಗ
ರುಡ ಗಮನನೆ ವೆಂಕಟೇಶ ನಿನ್ನ ಮನಕೆ ॥ 4 ॥

ಬರಿಯ ಮನೆಯಲ್ಲವೋ ಪರಿವಾರವುಂಟು
ಪರಮಪುರುಷ ನಿನ್ನ ರೂಪಗಳುಂಟು
ಸಿರಿದೇವಿಸಹಿತದಿ ಪುರಂದರವಿಠಲನೆ
ಕರುಣದಿಂದಲಿ ಮನ್ಮಂದಿರದೊಳಗೆ ॥ 5 ॥

—ಶ್ರೀ ಪುರಂದರದಾಸರು.

# ಮುಖ್ಯಗಮನಿಕೆ

* ತಿ. ತಿ. ದೇ. ಧಾರ್ಮಿಕ ಪುಸ್ತಕಗಳಿಗಾಗಿ
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಪಲಕಗಳು, ಕ್ಯಾಲೆಂಡರುಗಳು ಹುಂಡಿಯ ಡಬ್ಬಿಗಳಿಗಾಗಿ
* ವಾರ್ಷಿಕ ಶುಭಾಕಾಂಕ್ಷೆಯ ಪತ್ರಗಳು, ಪಂಚಾಂಗಗಳಿಗಾಗಿ
* ತಿ ತಿ. ದೇವಸ್ಥಾನಗಳ ಭಕ್ತಿಗೀತೆಗಳ ಕ್ಯಾಸೆಟ್‌ಗಳಿಗಾಗಿ

ಡಿ. ಡಿ, ಎಂ. ಓ, ಹಣವನ್ನು ಕಳುಹಿಸುತ್ತ ಕೂಡಲೇ ಬರೆಯಿರಿ.

ಡೆಪ್ಯೂಟಿ ಎಕ್ಸಿಕ್ಯೂಟಿವ್ ಆಫೀಸರ್ (ಎಸ್)

ತಿ.ತಿ. ದೇವಸ್ಥಾನಗಳು, ತಿರುಪತಿ - ೫೧೭ ೫೦೧.

---

# ಸಪ್ತಗಿರಿ

ತಿ. ತಿ. ದೇ. ಗಳ ಸಚಿತ್ರ ಮಾಸ ಪತ್ರಿಕೆ

ಕನ್ನಡ, ಹಿಂದಿ, ತೆಲುಗು, ತಮಿಳು, ಆಂಗ್ಲ ಭಾಷೆಗಳಲ್ಲಿ ಪ್ರಕಟವಾಗುವುದು.

**ಪತ್ರಿಕೆಯ ಪ್ರತಿಗಳಿಗಾಗಿ, ಏಜನ್ಸಿಗಾಗಿ, ಜಾಹೀರಾತುಗಳಿಗಾಗಿ**

**ಡಿ.ಡಿ, ಎಂ.ಓ, ಹಣವನ್ನು ಕಳುಹಿಸುತ್ತ ಕೂಡಲೇ ಬರೆಯಿರಿ.**

ಸಂಪಾದಕರು

ಸಪ್ತಗಿರಿ

ತಿ.ತಿ. ದೇವಸ್ಥಾನಗಳು, ತಿರುಪತಿ - ೫೧೭ ೫೦೧.





ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ ತಿ ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ॥

ಸಂಪುಟ ೧೯] ಫೆಬ್ರವರಿ ೧೯೮೭ [ಸಂಚಿಕೆ ೮

# ವಿಷಯಸೂಚಿ



ಮುಖಚಿತ್ರ ಶ್ರೀಮಧ್ವಾಚಾರ್ಯರು—ಚಿತ್ರ ಶ್ರೀ ಕೆ. ಜಗದೀಶ್
ಹಿಂಬದಿಯಲ್ಲಿ. ನಾಲ್ವರುನಾಯನ್ಮಾರರು – ಅಪ್ಪರ್, ಸುಂದರರ್, ಮಾಣಿಕ್ಯವಾಚಕರ್, ತಿರುಜ್ಞಾನ ಸಂಬಂಧರ್—ಚಿತ್ರ-ಕೆ ಜಗದೀಶ್
ಒಳಗಡೆ ವೈಕುಂಠ ಏಕಾದಶಿಯಲ್ಲಿ ಶ್ರೀವೆಂಕಟೇಶ್ವರಸ್ವಾಮಿ ಹಾಗೂ ಸ್ವಾಮಿಯ ಪಾರುವೇಟೆ ಉತ್ಸವದ ಮೆರವಣಿಗೆಯ ದೃಶ್ಯ.



ಮನುಷ್ಯನನ್ನು ಇತರ ಜೀವಿಗಳಿಂದ ಬೇರ್ಪಡಿಸುವುದು ಅವನ ಮಾತು ಮತಿಗಳು, ಎಂದರೆ ಆ ಮಾತು ಮತಿಗಳ ಮುಖ್ಯ ಪ್ರಯೋಜನ ತನಗೆ ಮಾತ್ರವೇ ಅಲ್ಲದೆ ತನ್ನವರಿಗೂ ಆಗಬೇಕೆಂಬುದೂ, ಈ ತನ್ನವರೆಂಬ ಭಾವನೆಯ ಅರ್ಥವ್ಯಾಪ್ತಿಯನ್ನು ಹಿಗ್ಗಿಸುತ್ತ ಸರ್ವೇ ಜನಾಃ ಸುಖಿನೋಭವಂತು ಎನ್ನುವುದೂ ಸನಾತನ ಧರ್ಮದಲ್ಲಿ ಎದ್ದುಕಾಣುವ ಅಂಶ.

ಸರ್ವಜನ ಸುಖವನ್ನು ವ್ಯಾವಹಾರಿಕ ಜಗತ್ತಿನಲ್ಲಿ ಬಯಸುತ್ತ ಅದಕ್ಕಾಗಿ ಕೆಲಸ ಮಾಡುತ್ತ, ಮುಂದುವರೆದಂತೆ ಜೀವ ದೇವಸಂಬಂಧವನ್ನು ತಿಳಿದುಕೊಂಡು ಇಹಜೀವನದಲ್ಲಿನ ಸಾತ್ತ್ವಿಕ ಜಯದಿಂದ ಪರವನ್ನು ಪೂರ್ಣಗೊಳಿಸಿಕೊಳ್ಳಬೇಕೆಂಬ ತೀವ್ರ ಆಸಕ್ತಿಯೂ ಸನಾತನ ಧರ್ಮದ ಹಿಂದು ಅಂಶವೇ. ಈ ಲೋಕ, ಲೋಕದಾಚೆಗಿನ–ಲೋಕ ಮೂಲದ–ಹುಟ್ಟು ಸಾವು ಮೋಕ್ಷಗಳ ಜಿಜ್ಞಾಸೆಯಲ್ಲಿ ಮಾರ್ಗ ಹಲವಾರು. ಹಲವು ಕಾಲದಲ್ಲಿ ಹಲವು ಹಿರಿಯ ಋಷಿ ಮುನಿ ಸಂತ ಗುರುಗಳು ಹುಟ್ಟಿ ಸುತ್ತಣ ಸಾಮಾನ್ಯರಿಗೆ ಸುಖ ಜೀವನ ವಿಧಾನವನ್ನು ಬೋಧಿಸಿದ್ದೇ ಅಲ್ಲದೆ, ಸರ್ವಮೂಲನನ್ನು ಹುಡುಕುವ ಹಾದಿಗೂ ಬೆಳಕು ಹಿಡಿದರೆಂಬುದು ಭಾರತೀಯ ಸಂಸ್ಕೃತಿ, ಧರ್ಮ, ಪರಂಪರೆಯಲ್ಲಿ ತಿಳಿದಿರುವುದೇ ಆಗಿದೆ. 'ಏಕೆ ಬಂದೆ ಇಲ್ಲಿಗೆ ಸುಮ್ಮನೆ ಎಲ್ಲದೆ ನಿಮ್ಮ ಮನೆ' ಎಂದು ಹಾಡಿದರೂ, ಇಲ್ಲಿರುವಾಗ ಇರದಂತೆ ಇದ್ದು, ಈಸಿ ಜೈಸಬೇಕೆಂದು ಕರೆಕೊಟ್ಟವರೂ ಉಂಟು. ಊರಿಂಗೆದಾರಿಯನು ಆರು ತೋರಿದರೇನು–ಎಂಬಂತೆ ಸನಾತನಧರ್ಮದಲ್ಲಿ ನಿಜದ ನೆಲೆಗೆ ನೂರು ಮಾರ್ಗಗಳು. ಎಲ್ಲವೂ ಉತ್ತಮವೇ.

ಶಂಕರಾಚಾರ್ಯ ರಾಮಾನುಜಾಚಾರ್ಯ ಮಧ್ವಾಚಾರ್ಯರು ಪ್ರಸ್ಥಾನತ್ರಯದ ಆಧಾರದಲ್ಲಿ 'ಅವನ'ನ್ನು ಹುಡುಕಲು ಪ್ರಯತ್ನಿಸಿದವರು. ವೈದಿಕ ಧರ್ಮದ ವೈವಿಧ್ಯತೆಯನ್ನು ಪ್ರಕಾಶಕ್ಕಿಟ್ಟು ತಮ್ಮ ಚಿಂತನೆ, ಅಲ್ಲಿಗೇ ಹೋಗಿ ಸೇರುವುದೆಂಬುದನ್ನು ವಿವಿಧ ಕಾಲಗಳಲ್ಲಿ ಎತ್ತಿ ತೋರಿಸಿ, ಧರ್ಮವನ್ನೂ ಅದನ್ನು ಅನುಸರಿಸಬೇಕಾದ ಜನವನ್ನೂ ಎಚ್ಚರಿಸಿದವರು. ದ್ವೈತಾದ್ವೈತ ವಿಶಿಷ್ಟಾದ್ವೈತಗಳಲ್ಲಿ ಎಲ್ಲವೂ ಮಾನ್ಯವೇ. ಮನುಷ್ಯನ ಸರ್ವಾಂಗೀಣ ಪ್ರಗತಿಗೆ, ಸಮಾಜದ ಅಭಿವೃದ್ಧಿಗೆ ಎಂಬುದನ್ನು ಮನಗಂಡು ನಡೆಯಬೇಕಾದ ಅಗತ್ಯ ಇಂದು ಒದಗಿಬಂದಿದೆಯೆಂದರೆ ಅತಿಶಯೋಕ್ತಿಯಾಗದು.

ಅಹಂ ದೇಹ ಬುದ್ಧ್ಯಾ ತವೈವಾಸ್ಮಿ ದಾಸಃ
ಅಹ ಜೀವ ಬುದ್ಧ್ಯಾ ತವೈವೇಕ ದೇಶಃ
ತ್ವಮೇವಾಹಂ ಸ್ವಾತ್ಮ ಬುದ್ಧ್ಯಾ ತಥಾಪಿ
ಪ್ರಸೀದಾಹಂ ದೇಹ ಬುದ್ಧ್ಯಾ ನಮಸ್ತೇ

—ಹೀಗಿರುವಾಗ ಮಧ್ವನವಮಿಯ ಶುಭದಿನದಲ್ಲಿ ಆಚಾರ್ಯರು ತೋರಿದ ಮಾರ್ಗವನ್ನು ಮನನ ಮಾಡಿ ದೇವರ ಕೃಪೆಬೇಡುವ.

ಮಹಾಶಿವರಾತ್ರಿಯೂ ಇದೇ ತಿಂಗಳಿನಲ್ಲಿ ಕೇಶವನಂತೆ ಶಿವನೂ ಶುಭಂಕರನೇ ಆಗುವ, ಅವರವರ ಭಾವಕ್ಕೆ ಅವರವರ ವೇಷಕ್ಕೆ ಅವರವರಿಗೆಲ್ಲ ಗುರುವಾದ 'ಅವನನ್ನು' ಯಾವ ರೂಪದಲ್ಲೂ ಕಾಣಬಹುದು. ನಾಯನ್ಮಾರುಗಳು ಶಿವಾರಾಧನೆಯ ಸುಳಿವು ಸೂಕ್ಷ್ಮಗಳನ್ನು ಚೆನ್ನಾಗಿ ಬಿಡಿಸಿ ತೇವಾರಗಳಾಗಿ ಮಾಡಿ ನೀಡಿದ್ದಾರೆ. ಶಂಕರ ನಾರಾಯಣ ರೂಪೀ ಪರಮಾತ್ಮನಿಗೆ ಅದೂ ಪ್ರಿಯವೇ ಎಂಬುದನ್ನು ನೆನೆಸಿ ಕೊಂಡು ಸೌಹಾರ್ದ, ಶಾಂತಿಗಳೆಡೆಗೆ ಪ್ರಪತ್ತಿಯಿಂದ ಸಾಗುವ ಮನ ಮಾಡುವ.

# ದ್ವೈತ ಪ್ರತಿಪಾದಕ ಮಧ್ವಾಚಾರ್ಯರು

ಡಾ॥ ಉಪ್ಪಂಗಳ ರಾಮಭಟ್ಟ

ಕ್ರಿಸ್ತಪೂರ್ವ ಎರಡು ಮೂರು ಸಾವಿರವರ್ಷಗಳಷ್ಟು ಹಿಂದೆಯೇ ಭಾರತದೇಶವು ತತ್ತ್ವಚಿಂತಕರ ನೆಲೆವೀಡಾಗಿತ್ತು. ಪಾಶ್ಚಾತ್ಯರಲ್ಲಿ ವಿಜ್ಞಾನವು ಬೆಳೆದು ಬಂದಂತೆ ಭಾರತೀಯರಲ್ಲಿ ತತ್ತ್ವಚಿಂತನೆ ಅನಾದಿಕಾಲದಿಂದ ಬೆಳೆದುಬಂದಿದೆ. ಭಾರತೀಯ ತತ್ತ್ವಜ್ಞಾನಿಗಳಲ್ಲಿ ದಕ್ಷಿಣದವರಾದ ಶಂಕರ, ರಾಮಾನುಜ ಮತ್ತು ಮಧ್ವರ ಹೆಸರುಗಳು ಎಂದೂ ಅಳಿವಿಲ್ಲದವು. ಈ ಮೂವರಲ್ಲಿ ಈಚಿನ ಮಧ್ವಾಚಾರ್ಯರು ತಮ್ಮ ಹಿಂದಿನವರ ತತ್ತ್ವಗಳನ್ನು ವೈಗೂಡಿಸಿ ತಮ್ಮದೇ ಹೊಸ ವಾದವನ್ನು ನೆಲೆಗೊಳಿಸಿದ ಧೀಮಂತರು. ಶಂಕರಾಚಾರ್ಯರ ಅದ್ವೈತ, ರಾಮಾನುಜರ ವಿಶಿಷ್ಟಾದ್ವೈತ ಇವೆರಡನ್ನೂ ಆಮೂಲಾಗ್ರ ಅಭ್ಯಸಿಸಿ ತಮ್ಮ 'ತತ್ತ್ವವಾದ' ವನ್ನು ಮಧ್ವಾಚಾರ್ಯರು ಪ್ರತಿಷ್ಠಾಪಿಸಿದರು. ಇವರ 'ತತ್ತ್ವವಾದ' ಈಗ 'ದ್ವೈತ' ಎಂದೇ ಪ್ರಸಿದ್ಧವಾಗಿದೆ

ಕ್ರಿಸ್ತಶಕದ, ಆದಿಯದಲ್ಲೂ ಮಧ್ವಾಚಾರ್ಯರ ಹುಟ್ಟೂರಾದ ಉಡುಪಿಯಲ್ಲಿ ಶೈವಮತವೇ ಪ್ರಸಿದ್ಧವಾಗಿತ್ತೆಂದು ಇಲ್ಲಿನ ಖ್ಯಾತ ಸಂಶೋಧಕರು ಅಭಿಪ್ರಾಯಿಸಿದ್ದಾರೆ ಆಗ ಶಿವಳ್ಳಿ ಎಂಬ ಗ್ರಾಮದ ಪುಟ್ಟ ಭಾಗವಾಗಿತ್ತು ಈಗ ಶ್ರೀಕೃಷ್ಣ ದೇವಸ್ಥಾನವಿರುವ ಉಡುಪಿ ಎಂಬ ಜಾಗ. 'ಶಿವಳ್ಳಿ' (ಶಿವ ಹಳ್ಳಿ) ಎಂಬ ಹೆಸರೇ ಇಲ್ಲಿನ ಆರಾಧ್ಯ ದೇವತೆ ಶಿವ ಎಂಬುದನ್ನು ಸೂಚಿಸುತ್ತದೆ. ಇಲ್ಲಿನ ಪ್ರಾಚೀನ ದೇವಾಲಯಗಳೆಲ್ಲಾ ಶಿವ ಅಥವಾ ಶಕ್ತಿಗೆ ಸಂಬಂಧಿಸಿದವು. ತುಳುವರ ಬಾಯಲ್ಲಿ 'ಒಡವು' (ಇಳಿಜಾರಾದ ಪ್ರದೇಶ) ಆಗಿದ್ದ ಈಗಲೂ ಆಗಿರುವ ಆ ಹೆಸರು ಕನ್ನಡಿಗರ ಬಾಯಲ್ಲಿ ಧ್ವನಿ ಪರಿವರ್ತನೆಯಿಂದ (ಇದನ್ನು ಅನ್ಯತ್ರ ವಿವರಿಸಲಾಗಿದೆ) ಉಡುಪಿ ಆಗಿ ಪರಿವರ್ತಿತವಾಯಿತು. ಮಧ್ವಾಚಾರ್ಯರು ಇಲ್ಲಿ ಕೃಷ್ಣದೇವಸ್ಥಾನವನ್ನು ಸ್ಥಾಪಿಸಿ ಅದು ಪ್ರಸಿದ್ಧವಾದ ಮೇಲೆ 'ಉಡುಪಿ'ಯೇ ತಾಲೂಕಿಗೂ ಹೆಸರಾಯಿತು.

ಇಲ್ಲಿನ ಆಳುಪರಾಜರೂ ಶೈವರಾಗಿದ್ದರು. ಕರ್ನಾಟಕದ ಪ್ರಾಚೀನ ಹಲ್ಮಿಡಿ ಶಾಸನದಲ್ಲೇ ಆಳುಪಗಣ ಪಶುಪತಿಯ ಉಲ್ಲೇಖವಿದೆ. ಶಂಕರಾಚಾರ್ಯರು ಮತ್ತು ಅವರ ಶಿಷ್ಯರ ಆಗಮನದಿಂದ ಈ ಕಡೆಯಲ್ಲಿ ವೈಷ್ಣವ ಮತ ಪ್ರಚಾರಕ್ಕೆ ಬಂದಿರಬೇಕು. ಕ್ರಿಸ್ತ ಶಕ ಸುಮಾರು ಹತ್ತನೇ ಶತಮಾನದಲ್ಲಿದ್ದ ಆನಂದಗಿರಿಯು ಬರೆದ 'ಶಂಕರ ವಿಜಯ' ದಲ್ಲಿ ಶಂಕರಾಚಾರ್ಯರ ನೇರ ಶಿಷ್ಯರಾದ ಹಸ್ತಾಮಲಕರು ಉಡುಪಿಯಲ್ಲಿ ಕೃಷ್ಣನನ್ನು ಸ್ಥಾಪಿಸಿದ ಉಲ್ಲೇಖವಿದೆ.

ಮಧ್ವಾಚಾರ್ಯರು ಅವತರಿಸಿದ ಹದಿಮೂರನೆಯ ಶತಮಾನದ ಕಾಲವು ಇಡಿಯ ಭಾರತದಲ್ಲೇ ರಾಜಕೀಯ ಮತ್ತು ಧಾರ್ಮಿಕ ಅಶಾಂತಿಯ ಕಾಲವಾಗಿತ್ತು. ಹಲವಾರು ಸಣ್ಣಪುಟ್ಟ ರಾಜ್ಯಗಳೊಳಗೆ ಮೇಲಾಟಕ್ಕಾಗಿ ಆಗಿಂದಾಗ ಹೋರಾಟಗಳು ನಡೆಯುತ್ತಿದ್ದವು. ಭಾರತದಲ್ಲಿ ಇಸ್ಲಾಂ ಧರ್ಮವೂ ನೆಲೆಯೂರಿ ಹಿಂದೂ ಧರ್ಮಕ್ಕೆ ಅದು ಪ್ರಬಲಪ್ರತಿಸ್ಪರ್ಧಿಯಾಗಿತ್ತು. ಹಲವಾರು ರಾಜ್ಯಗಳಲ್ಲಿ ಮುಸಲ್ಮಾನರೇ ರಾಜರಾಗಿದ್ದರು. ಹಿಂದೂಧರ್ಮವು ಒಂದು ರೀತಿಯ ಅರಾಜಕತೆಯಿಂದ ತತ್ತರಿಸಿತ್ತು. ಇಂತಹ ಪರಿಸ್ಥಿತಿಯಲ್ಲಿ ಐಹಿಕ ಜೀವನ, ಪ್ರಪಂಚ ಇವುಗಳ ಸಾರಸತ್ತ್ವಗಳನ್ನು ಜನರಿಗೆ ಮನವರಿಕೆ ಮಾಡಿ ನೈತಿಕ ಬೆಂಬಲವನ್ನು ನೀಡಿದವರು ಶ್ರೀ ಮಧ್ವಾಚಾರ್ಯರು.

ಪಾಜಕದಲ್ಲಿ ಉದಿಸಿದ ಪರಿವ್ರಾಜಕ—

ದಕ್ಷಿಣಕನ್ನಡ ಅಥವಾ ತುಳುನಾಡಿನ ಶಿವಳ್ಳಿ ಗ್ರಾಮದ ಉಡುಪಿ ಸಮೀಪದ ಕುಂಜಿಬೆಟ್ಟಿನ ಪಕ್ಕದಲ್ಲಿ ಸಗ್ರಿ ಪುಟ್ಟ ಜಾಗ. ನಡಿಲ್ಲಾಯರು (ನಾರಾಯಣ) ಪತ್ನಿ ವೇದವತಿಯೊಂದಿಗೆ ಇಲ್ಲಿ ವಾಸವಾಗಿದ್ದರು. ಮುಂದೆ ಇಲ್ಲಿಂದ ಎಂಟುಮೈಲು ದಕ್ಷಿಣಕ್ಕಿರುವ ಪಾಜಕಕ್ಷೇತ್ರ (ಈಗಿನ ಬೆಳ್ಳೆ) ಕ್ಕೆ ಇವರು ತಮ್ಮ ವಸತಿಯನ್ನು ಬದಲಾಯಿಸಿದರಂತೆ. 'ನಡುಮನೆಯವನು' ಎಂಬರ್ಥದ (ನಡುವಂತಿಲ್ಲಾಯ) ಎಂಬುದು ಶಿವಳ್ಳಿ ಬ್ರಾಹ್ಮರ ಕುಲನಾಮಗಳಲ್ಲೊಂದು. ಕೆಲವೆಡೆ 'ನಡಿಲ್ಲಾಯ' ಎಂಬುದೂ ಶಿವಳ್ಳಿಯವರಲ್ಲಿದೆ ಇದೇ ಹೆಸರಿನ ಭಾಷಾಂತರ ಸಂಸ್ಕೃತದಲ್ಲಿ ಮಧ್ಯಗೇಹ. ಬ್ರಾಹ್ಮಣರು ಭಟ್ಟರಾದುದರಿಂದ ಅದೂ ಸೇರಿ "ಮಧ್ಯಗೇಹ ಭಟ್ಟ" ಈ ಹೆತ್ತವರ ಹೆಸರು ಇನ್ನೂ ನಿಖರವಾಗಿಲ್ಲ. ನಾರಾಯಣ ಪಂಡಿತಾಚಾರ್ಯರು ಬರೆದ "ಸುಮಧ್ವ ವಿಜಯ" ವೆಂಬ ಮಧ್ವಾಚಾರ್ಯರ ಜೀವನ ಚರಿತ್ರೆಯನ್ನೊಳಗೊಂಡ ಕಾವ್ಯದಲ್ಲಿ ತಂದೆಯನ್ನು ಮಧ್ಯಗೇಹ ಭಟ್ಟನೆಂದೇ ಹೇಳಿದ್ದರೂ ಅದು ಹೆಸರಲ್ಲ. ಕುಲನಾಮ ಮಾತ್ರವಾಗಿದೆ. 'ಪಾಜಕ' ಎಂಬ ಹೆಸರೂ ಪಾದೆ (ಪಾರೆ) ಎಂಬ ತುಳು ಹೆಸರಿನ ರೂಪಾಂತರ. ಈಗಲೂ ಇಲ್ಲಿ ಪಾರೆಕಲ್ಲು ಬಹಳವಾಗಿರುವುದೇ ಇದಕ್ಕೆ ಸಾಕ್ಷಿ. ಉಡುಪಿಯ ಅನಂತೇಶ್ವರನ ಭಕ್ತರಾದ ಈ ದಂಪತಿಗಳು ಹಲವು ವರ್ಷಗಳಿಂದ ಪುತ್ರ ಸಂತಾನಕ್ಕಾಗಿ ಹಂಬಲಿಸಿ ತಮ್ಮ ದೇವರನ್ನೇ ಮೊರೆಹೊಕ್ಕರು. ಹನ್ನೆರಡು ವರ್ಷಗಳಿಂದ ನಡೆಸಿದ ಅವರ ಸೇವಾವ್ರತದ ಫಲವಾಗಿ ಜನಿಸಿದ ಸುಕುಮಾರನಿಗೆ ವಾಸುದೇವನೆಂದು ಹೆಸರಿಟ್ಟರು. ಹುಟ್ಟಿದ ನೆಲ ಪಾರೆ, ಅಂತೆಯೇ ಆಗಿನ ಕಾಲಸ್ಥಿತಿ. ಅದನ್ನು ಹಸನುಗೊಳಿಸಿ ತತ್ತ್ವಜ್ಞಾನದ ಅಮೃತಫಲವನ್ನು ಬೆಳೆಸಿದ ಈ ಮಹಾಪುರುಷ.

ಮಧ್ವಾಚಾರ್ಯರೇ ಹೇಳುವಂತೆ ಅವರು ಹುಟ್ಟಿದ ವರ್ಷ ಕಲಿಗತಾಬ್ದ 4300. ಇದು ಸ್ಪಷ್ಟವಿಲ್ಲದ್ದರಿಂದ ನಿಖರತೆಗೆ ಬೇರೆ ಆಧಾರಗಳನ್ನೇ



ಅವಲಂಬಿಸಬೇಕಾಗುತ್ತದೆ. ಮಧ್ವಾಚಾರ್ಯರ ನೇರ ಶಿಷ್ಯರಾದ ನರಹರಿ ತೀರ್ಥರು ಶ್ರೀಕೂರ್ಮದ ಶಾಸನವನ್ನು ಬರೆಯಿಸುವಾಗ ತಮ್ಮ ಗುರುಗಳಾದ ಆನಂದತೀರ್ಥ (ಮಧ್ವಾಚಾರ್ಯರು) ಜೀವಂತವಿದ್ದುದಾಗಿ ಹೇಳುತ್ತಾರೆ. ಈ ಶಾಸನದ ಕಾಲ ಶಕ 1203 ಅಂದರೆ ಕ್ರಿ.ಶ. 1281 ಮಧ್ವಾಚಾರ್ಯರ ಜೀವಿತಾವಧಿ ಎಪ್ಪತ್ತೊಂಬತ್ತು ವರ್ಷವೆಂದು ಸಾಹಿತ್ಯಾಧಾರ ನಿಖರವಾಗಿದೆ. ಪಿಂಗಳ ವತ್ಸರದಲ್ಲಿ ಅವರು ಸ್ವರ್ಗಸ್ಥರಾದುದಾಗಿಯೂ ಹೇಳಿದೆ. ಈ ಆಧಾರಗಳಿಂದ ಅವರ ಕಾಲವನ್ನು ಕ್ರಿ. ಶ. 1238–1317 ಎಂಬುದಾಗಿ ಡಾ॥ ಬಿ.ಎನ್ ಕೆ. ಶರ್ಮರು ಮಧ್ವಾಚಾರ್ಯರ ಕುರಿತಾದ ತಮ್ಮ ಗ್ರಂಥದಲ್ಲಿ ಹೇಳಿದ್ದಾರೆ.

ಮಧ್ವಾಚಾರ್ಯರ ಜೀವನಚರಿತ್ರೆಯನ್ನೊಳಗೊಂಡ ಕಾವ್ಯ "ಶ್ರೀಮತ್ಸು ಮಧ್ವವಿಜಯ". ಇದನ್ನು ಬರೆದವರು ಅವರ ನೇರ ಶಿಷ್ಯ ತ್ರಿವಿಕ್ರಮ ಪಂಡಿತಾಚಾರ್ಯರ ಪುತ್ರರಾದ ನಾರಾಯಣ ಪಂಡಿತಾಚಾರ್ಯರು. ಈ ಕಾವ್ಯವನ್ನು ಬರೆದ ಕಾಲ ಆಚಾರ್ಯರ ಜೀವಿತಕಾಲಕ್ಕೆ ಹತ್ತಿರವಾದ್ದರಿಂದ ಇದರಲ್ಲಿನ ವಿವರಗಳನ್ನು ನಂಬಬಹುದಾಗಿದೆ. ಕಾವ್ಯರೂಪದಲ್ಲಿರುವುದರಿಂದ ಹಲವಾರು ವರ್ಣನೆಗಳು ಅತಿಶಯೋಕ್ತಿಗಳು ಇರಬಹುದಾದರೂ ಇದೇ ಅವರ ಜೀವನ ಚರಿತ್ರೆಗೆ ಪ್ರಮುಖ ಆಧಾರ. ಆಚಾರ್ಯರ ಸಾಧನೆ, ಸಿದ್ಧಿ, ಪವಾಡ, ಮಹಾಕಾರ್ಯಗಳನ್ನೆಲ್ಲಾ ವಿಸ್ತಾರವಾಗಿ ಹದಿನಾರು ಸರ್ಗಗಳಲ್ಲಿ ವಿವರಿಸಲಾಗಿದೆ.

ಆಗಿನ ಕಾಲದಲ್ಲಿ ಅದ್ವೈತ ಪಂಥದಲ್ಲಿ ಅಗ್ರಗಣ್ಯರಾದ ಅಚ್ಯುತಪ್ರಜ್ಞರು (ಅಚ್ಯುತ ಪ್ರೇಕ್ಷರೆಂದೇ ಪ್ರಸಿದ್ಧಿ) ವಾಸುದೇವನಿಗೆ ಪೂರ್ಣಪ್ರಜ್ಞ ಎಂಬ ಹೆಸರಿನಿಂದ ಸನ್ಯಾಸ ದೀಕ್ಷೆಯನ್ನು ಕರುಣಿಸಿದರು. ಆರಂಭದ ವಿದ್ಯೆಯನ್ನು ತಂದೆಯಿಂದಲೇ ಪಡೆದ ನಿಶಿತಮತಿ ವಾಸುದೇವ ಅಚ್ಯುತಪ್ರೇಕ್ಷರಿಂದ ಹೆಚ್ಚಿನ ವಿದ್ಯಾಭ್ಯಾಸ ಮುಂದುವರಿಸಿದ. ಬಾಲ್ಯದಲ್ಲೇ ತತ್ತ್ವಜ್ಞಾನ, ವೈರಾಗ್ಯದಲ್ಲಿ ಆಸಕ್ತನಾದ ಬಾಲಕ ಸನ್ಯಾಸಕ್ಕಾಗಿ ತಂದೆಯ ಅನುಮತಿಯನ್ನು ಯಾಚಿಸಿದ್ದ. ಒಬ್ಬನೇ ಮಗ ಸನ್ಯಾಸಿಯಾಗಲು ತಂದೆ ಒಪ್ಪದಾದಾಗ ತನಗೊಬ್ಬ ತಮ್ಮ ಜನಿಸಿದ ಮೇಲೆ ತಂದೆಯಿಂದ ಸನ್ಯಾಸಕ್ಕೆ ಅನುಮತಿಯನ್ನು ದೊರಕಿಸಿಕೊಂಡಿದ್ದ. ಕುಶಾಗ್ರಮತಿಯಾದ ಪೂರ್ಣಪ್ರಜ್ಞ ಅಲ್ಪಕಾಲದಲ್ಲೇ ಶಾಸ್ತ್ರಾದಿಗಳಲ್ಲಿ ಪರಿಣತನಾಗಿ ಗುರುವನ್ನೂ ಮೀರಿಸುವವನಾದ. ಅವನಿಗೆ ಗುರುಗಳಲ್ಲಿ ಅಭಿಪ್ರಾಯ ಭೇದವೂ ತಲೆದೋರಿತು. ತನ್ನ ಶಿಷ್ಯನ ಯೋಗ್ಯತೆಯನ್ನು ಗಮನಿಸಿದ ಗುರು ಅವನಿಗೆ 'ಆನಂದ ತೀರ್ಥ' ಎಂಬ ಹೆಸರನ್ನಿಟ್ಟು, ತನ್ನ ಮಠದ ಉತ್ತರಾಧಿಕಾರವನ್ನೂ ವಹಿಸಿಕೊಟ್ಟರು. ಆನಂದ ತೀರ್ಥರು 'ಮಧ್ವ' ಎಂಬ ವೈದಿಕ ನಾಮಧೇಯವನ್ನು ತಮ್ಮದೇ ಇಚ್ಛೆಯಿಂದ ಇರಿಸಿಕೊಂಡು ಆ ಹೆಸರಿನಿಂದಲೇ ಪ್ರಸಿದ್ಧರಾದರು. ಮಧು ಎಂದರೆ ಆನಂದ, ವ ಎಂದರೆ ತೀರ್ಥ, ಆನಂದ ತೀರ್ಥ ಎಂಬುದರ ಪರ್ಯಾಯವೇ ಮಧ್ವ.

ಅಪ್ರತಿಮ ವಿದ್ವಾಂಸರೂ ಜ್ಞಾನಿಗಳೂ ಆದ ಮಧ್ವಾಚಾರ್ಯರು ಎಳವೆಯಲ್ಲೇ ಪ್ರಸಿದ್ಧರಾಗಿ ಅನೇಕ ಶಿಷ್ಯರಿಗೆ ಜ್ಞಾನಬೋಧೆಯನ್ನಿತ್ತರು. ನ್ಯಾಯ ವಿಶಾರದರು, ಬೌದ್ಧರು, ಅದ್ವೈತಿಗಳು ಮೊದಲಾದ ವಿದ್ವಾಂಸರೊಂದಿಗೆ ವಾದ ತತ್ತ್ವ ವಿಚಾರಗಳನ್ನು ನಡೆಸಿ ಅವರನ್ನು ವಾದದಲ್ಲಿ ಗೆದ್ದರು.

ಹೊಸಬೆಳಕು ತತ್ತ್ವಜ್ಞಾನದಲ್ಲಿ ತನ್ನದೇ ಹೊಸವಿಚಾರವನ್ನು ಕಂಡುಕೊಂಡ ಮಧ್ವರು ಅದನ್ನು ಬೆಳಕಿಗೆ ತರುವುದಕ್ಕಾಗಿ ಮೊದಲನೆಯ ದಕ್ಷಿಣಭಾರತ ಯಾತ್ರೆಯನ್ನು ಕೈಗೊಂಡರು. ಅನಂತಶಯನ, ಕನ್ಯಾಕುಮಾರಿ, ರಾಮೇಶ್ವರ ಮೊದಲಾದ ಪುಣ್ಯಕ್ಷೇತ್ರಗಳಾದ ವಿದ್ಯಾಕೇಂದ್ರಗಳಲ್ಲಿ ಬ್ರಹ್ಮಸೂತ್ರದ ಮೇಲೆ ವಾದಗಳನ್ನು ಕೈಗೊಂಡು ಅಲ್ಲಿನ ವಿದ್ವಾಂಸರನ್ನು ದಂಗು ಬಡಿಸಿದರು. ಅನಂತಶಯನ (ಈಗಿನ ತಿರುವನಂತಪುರ) ದಲ್ಲಿ ಅದ್ವೈತಿಗಳೊಡನೆ, ಶ್ರೀರಂಗದಲ್ಲಿ ರಾಮಾನುಜರ ಅನುಯಾಯಿಗಳೊಡನೆ ಅವರು ನಡೆಸಿದ ಚರ್ಚೆ ಅದ್ವಿತೀಯವಾಗಿದ್ದವು. ಹದಿಹರೆಯದ ಈ ಪೋರನ ಪಾಂಡಿತ್ಯ ವಾಗ್ವೈಖರಿಗಳಿಂದ ಅಲ್ಲಿನ ಹಿರಿಯ ವಿದ್ವಾಂಸರು ಪ್ರಭಾವಿತರಾದರು. ಇದರ ಫಲವಾಗಿ ವೇದಾಂತದಲ್ಲಿ ತನ್ನದೊಂದು ಹೊಸ ಬೆಳಕನ್ನು ಚೆಲ್ಲಲು ಅವರು ತೀರ್ಮಾನಿಸಿದರು.

ದಕ್ಷಿಣಭಾರತದ ಯಾತ್ರಾನಂತರ ಉತ್ತರ ಭಾರತದ ಕಡೆಗೆ ಅವರ ಗಮನ ಹರಿಯಿತು. ಬದರಿಕಾಶ್ರಮ ವ್ಯಾಸಾಶ್ರಮಗಳನ್ನು ಸಂದರ್ಶಿಸಿದರು. ಬದರೀನಾಥದ ಅನಂತ ಮಠದಲ್ಲಿ ತಮ್ಮ ಗೀತಾಭಾಷ್ಯವನ್ನು ರಚಿಸಿದರು. ವ್ಯಾಸಾಶ್ರಮದಲ್ಲಿ ಸಾಕ್ಷಾತ್ ವ್ಯಾಸರೇ ಪ್ರತ್ಯಕ್ಷರಾಗಿ ಅವರನ್ನು ಅನುಗ್ರಹಿಸಿದರೆಂದು ನಂಬಲಾಗಿದೆ. ವ್ಯಾಸಾಶ್ರಮದ ಸಂದರ್ಶನದ ಸ್ಫೂರ್ತಿಯಿಂದಲೇ ಬ್ರಹ್ಮಸೂತ್ರ ಭಾಷ್ಯವನ್ನೂ ಬರೆದರು. ಅಲ್ಲಲ್ಲಿ ವಿದ್ವಾಂಸರನ್ನು ಭೇಟಿಯಾಗುತ್ತಾ ಹಲವರನ್ನು ವಾದದಲ್ಲಿ ಗೆದ್ದು ತಮ್ಮ ಶಿಷ್ಯರನ್ನಾಗಿಸುತ್ತಾ ಬಿಹಾರ, ಬಂಗಾಳ, ಒರಿಸ್ಸಾ, ಆಂಧ್ರ, ಮಹಾರಾಷ್ಟ್ರ, ದಾಟಿ ಕರ್ನಾಟಕದ ಉಡುಪಿಗೆ ಹಿಂತಿರುಗಿದರು

(33ನೇ ಪುಟನೋಡಿ)

# ತಲವಕಾರೋಪನಿಷತ್ತಿನಲ್ಲಿ ಪೂರ್ಣಪ್ರಜ್ಞ ದರ್ಶನ

**ಶ್ರೀ ಕೆ. ಬಿ. ಅರ್ಚಕ್**

ಮಾನವ ಜೀವಿಯ ಸಕಲವ್ಯಾಪಾರಗಳನ್ನು ನಡೆಸುವ ಇಂದ್ರಿಯಗಳ ಮೂಲಕ ಬರುವ ಅನುಭವಕ್ಕೆ ನಿಲುಕದ ಯಾವುದೋ ಒಂದು ಅದ್ಭುತವಾದ ಚೇತನ ಶಕ್ತಿಯು ಇದೆಯೆಂದು ಸಾಮಾನ್ಯವಾಗಿ ಎಲ್ಲರೂ ಒಪ್ಪತಕ್ಕ ಮಾತಾಗಿದೆ. ಈ ಶಕ್ತಿಯು ಪರಮಸ್ವತಂತ್ರನಾದ, ಸರ್ವೋತ್ತಮನಾದ ಶ್ರೀಮನ್ನಾರಾಯಣನೇ ಹೊರತು ಮತ್ತಾವುದೂ ಅಲ್ಲ. ಇಂಥ ಶ್ರೀಮನ್ನಾರಾಯಣನ ಅನುಗ್ರಹವನ್ನು ಸಂಪಾದಿಸಿ ಪರಮ ಸೌಖ್ಯವನ್ನು ಹೊಂದಬೇಕಾದರೆ ಸಮಸ್ತವೇದಗಳಲ್ಲಿ ನಿರೂಪಿತಗೊಂಡ ಪರಮಾತ್ಮನ ತತ್ತ್ವಗಳನ್ನು ಶ್ರವಣ, ಮನನ ಮತ್ತು ನಿದಿಧ್ಯಾಸನರೂಪವಾಗಿ ಉಪಾಸನೆ ಮಾಡುವುದು ಅತ್ಯವಶ್ಯಕ. ವೇದಗಳ ಅಂತಿಮ ಭಾಗವಾದ ಉಪನಿಷತ್ತುಗಳಲ್ಲಿ ಸರ್ವ ಮಂಗಲರೂಪಿಯಾದ ಶ್ರೀಮನ್ನಾರಾಯಣನ ತತ್ತ್ವಗಳನ್ನು ಸ್ಪಷ್ಟವಾಗಿ ಉಪದೇಶಿಸಿರುವುದು ಕಂಡು ಬರುವದು. ಇಂತಹ ಉಪನಿಷತ್ತುಗಳಲ್ಲಿ. ಪ್ರಕೃತಕ್ಕೆ ಸಂಬಂಧಪಟ್ಟ, ಸಾಮವೇದದ ತಲವಕಾರ ಬ್ರಾಹ್ಮಣದಲ್ಲಿ ಹೇಳಲ್ಪಟ್ಟ ತಲವಕಾರೋಪನಿಷತ್ತು ಕೂಡ ಒಂದಾಗಿದೆ

ಈಶಾವಾಸ್ಯೋಪನಿಷತ್ತಿನಂತೆ, ಈ ಉಪನಿಷತ್ತು 'ಕೇನೇಷಿತಂ ಪತತಿ......' ಎಂದು ಆರಂಭವಾದುದರಿಂದ ಇದಕ್ಕೆ ಕೇನೋಪನಿಷತ್ತು ಎಂದು ಕರೆಯುವ ಪ್ರಸಿದ್ಧಿಯೂ ಇರುವುದು. ಇದರಲ್ಲಿರುವ ನಾಲ್ಕು ಖಂಡಗಳಲ್ಲಿ ಮೊದಲಿನ ಎರಡು ಖಂಡಗಳು ಛಂದೋಬದ್ಧವಾದ ಕಾವ್ಯರೂಪದಲ್ಲಿದ್ದು, ಕೊನೆಯ ಎರಡು ಖಂಡಗಳು ಗದ್ಯರೂಪದಲ್ಲಿರುತ್ತವೆ

ಈ ಉಪನಿಷತ್ತಿಗೆ ಅದ್ವೈತಮತ ಪ್ರವರ್ತಕರಾದ ಶ್ರೀ ಶಂಕರಾಚಾರ್ಯರು, ವಿಶಿಷ್ಟಾದ್ವೈತ ಮತ ಪ್ರವರ್ತಕರಾದ ಶ್ರೀರಂಗ ರಾಮಾನುಜರು, ಮತ್ತು ದ್ವೈತ ಸಿದ್ಧಾಂತ ಶೋತ್ತೇಜಕರಾದ ಶ್ರೀ ಪೂರ್ಣಪ್ರಜ್ಞರು (ಮಧ್ವಾಚಾರ್ಯರು) ರಚಿಸಿದ ಭಾಷ್ಯಗಳು ಪ್ರಮುಖವಾದವುಗಳು. ಇವುಗಳಲ್ಲಿ ಪ್ರಕೃತಕ್ಕೆ ಸಂಬಂಧಿಸಿದಂತೆ ಶ್ರೀಪೂರ್ಣಪ್ರಜ್ಞರು ಬ್ರಹ್ಮಸೂತ್ರದ ಒಂದು ಭಾಗವನ್ನು ಈ ಸಮಸ್ತ ಉಪನಿಷತ್ತಿಗೆ ಭಾಷ್ಯರೂಪವಾಗಿ ವ್ಯಾಖ್ಯಾನಿಸಿದ್ದಾರೆ. ಅದರ ವಿವೇಚನೆ ಹೀಗಿದೆ.

ಶ್ರೋತ್ರಸ್ಯ ಶ್ರೋತ್ರಂ
ಮನಸೋ ಮನೋ
ಯದ್ವಾಚೋ ಹ ವಾಚಂ
ಸ ಉ ಪ್ರಾಣಸ್ಯ ಪ್ರಾಣಃ।
ಚಕ್ಷುಷಃ ಚಕ್ಷು ರತಿಮುಚ್ಯಧೀರಾಃ
ಪ್ರೇತ್ಯಾಸ್ಮಾ ಲ್ಲೋಕಾದಮೃತಾ
ಭವಂತಿ ॥ (೧.೨)

ಶ್ರವಣೇಂದ್ರಿಯಕ್ಕೆ ಕೇಳುವ ಶಕ್ತಿಯನ್ನೂ ಮನಸ್ಸಿಗೆ ಮನನ ಮಾಡುವ ಶಕ್ತಿಯನ್ನು ವಾಗಿಂದ್ರಿಯಕ್ಕೆ ಮಾತನಾಡುವ ಶಕ್ತಿಯನ್ನೂ, ಮುಖ್ಯಪ್ರಾಣನಿಗೆ ಚಲನಶಕ್ತಿಯನ್ನೂ ಕೊಡತಕ್ಕ ಸರ್ವಶಕ್ತನಾದ ಪರಮಾತ್ಮನ ಸರ್ವೋತ್ತಮತ್ತ್ವವನ್ನು ಇಲ್ಲಿ ನಿರೂಪಿಸಲಾಗಿದೆ. ಇದಲ್ಲದೇ ಕಣ್ಣು ಮುಂತಾದ ಇಂದ್ರಿಯಾಭಿಮಾನಿದೇವತೆಗಳಿಗೆ ಪೋಷಕನಾಗಿ, ಅವರೆಲ್ಲರಿಗಿಂತಲೂ ಉತ್ತಮನಾಗಿರುವನೆಂದೂ ಸೂಚ್ಯವಾಗಿ ತಿಳಿದು ಬರುವುದು. ಪ್ರಾಣಾದಿಸಕಲ ಇಂದ್ರಿಯಗಳಿಗೆ ನಿಯಾಮಕನಾದವನು ಶ್ರೀ ವಿಷ್ಣು ಪರಮಾತ್ಮನೆಂದು ಬಾದರಾಯಣ ಸೂತ್ರದಲ್ಲಿ ನಿರ್ಣಯಿಸಲ್ಪಟ್ಟಿದೆ.

ಯದಿ ಮನ್ಯಸೇ ಸುವೇದೇತಿ
ದಹರಮೇ ವಾಪಿ
ನೂನಂ ತ್ವಂ ವೇತ್ಥ
ಬ್ರಹ್ಮಣೋರೂಪಮ್।
ಯದಸ್ಯ ತ್ವಂ ಯದಸ್ಯ ದೇವೇಷ್ವಥ
ನು ಮಿಮಾಂಸ್ಯ ಮೇವ ತೇ॥

ಇಂಥ ಪರಮಾತ್ಮನ ಸ್ವರೂಪವು ಅನಂತವಾಗಿರುವುದು. ಈ ಅನಂತವಾದ ಸ್ವರೂಪವನ್ನು ಸಾಕಲ್ಯೇನ ತಿಳಿಯಲು ಯಾವ ಅಭಿಮಾನಿ ದೇವತೆಗಳಿಂದಲೂ. ಅಥವಾ ಸಕಲ ಜೀವರಾಶಿಗೆ ಉತ್ತಮನಾದ ಮುಖ್ಯಪ್ರಾಣನಿಂದಲೂ ಅಸಾಧ್ಯವೇ. ಇಂತಹ ಅಗಮ್ಯವಾದ ಪರಮಾತ್ಮನ ಸ್ವರೂಪವು ಇದೇ ಉಪನಿಷತ್ತಿನ ಮೂರನೇ ಖಂಡದಲ್ಲಿ ಪಾರ್ವತಿ-ಪರಮೇಶ್ವರರ ಸಂವಾದ ರೂಪವಾಗಿ ಉಕ್ತವಾಗಿದೆ.

ಒಂದು ದೇಶಕ್ಕೆ ರಾಜನು ನಿಯಾಮಕನಾಗಿದ್ದಾಗ ನಿಯಮ್ಯರಾದ ಪ್ರಜೆಗಳೂ ಇರಲೇ ಬೇಕು, ರಾಜನ ಆದೇಶದಂತೆ ಪ್ರಜೆಗಳು ನಡೆಯುವರು. ಹಾಗೆಯೇ 'ಶ್ರೋತ್ರಸ್ಯ ಶ್ರೋತ್ರಂ ........' ಎಂಬ ಶ್ಲೋಕದಲ್ಲಿ ಪರಮಾತ್ಮನು ಸಕಲ ಜಗತ್ತಿಗೆ ನಿಯಾಮಕನೂ, ಸಕಲೇಂದ್ರಿಯಾಭಿಮಾನಿದೇವತೆಗಳಿಗೆ ಪೋಷಕನೂ ಎಂದು ತಿಳಿದು ಬರುವುದು. ಈ ವಿಷಯವನ್ನು ಮೂರನೆ ಖಂಡದಲ್ಲಿಯ ಪೌರಾಣಿಕ ದೃಷ್ಟಾಂತದಿಂದ ಧೃಡೀಕರಿಸಬಹುದು.

ಒಂದು ಸಲ ದೇವ-ದಾನವರಲ್ಲಿ ಯುದ್ಧವಾಗಲು ಪರಮಾತ್ಮನು ದೇವತೆಗಳಲ್ಲಿ ಅಂತರ್ಗತನಾಗಿ ದೇವತೆಗಳಿಗೆ ಜಯವನ್ನು ದೊರಕಿಸಿಕೊಟ್ಟನು. ಆದರೆ ದೇವತೆಗಳು ಅದನ್ನು ಲಕ್ಷಿಸದೇ, ಜಯವು ಸ್ವಶಕ್ತಿಯಿಂದ ಲಬ್ಧವಾದುದೆಂದು ತಿಳಿದು ಗರ್ವಯುಕ್ತರಾದರು. ಅಸುರಾವೇಶದ ಮೂಲಕ ಅವರಲ್ಲಿ ಹುಟ್ಟಿದ ಈ ಗರ್ವವನ್ನು ನಾಶಪಡಿಸಲು ಪರಮಾತ್ಮನು ಯಕ್ಷರೂಪವನ್ನು ಧರಿಸಿ ರುದ್ರಾದ್ರಿಗಳ ಸಹಿತ ದೇವತೆಗಳ ಸಮೀಪಕ್ಕೆ ಪ್ರಕಟನಾದನು. ಈ ಯಕ್ಷರೂಪಿ ಪರಮಾತ್ಮನ ಸ್ವರೂಪವನ್ನು ತಿಳಿಯುವುದು ಅಗ್ನಿಯಿಂದ ಮೊದಲುಮಾಡಿ

ಇಂದ್ರನವರೆಗಿದ್ದ ಯಾವ ದೇವತೆಗಳಿಂದಲೂ ಸಾಧ್ಯವಾಗಲಿಲ್ಲ. ಯಕ್ಷರೂಪಿ ಪರಮಾತ್ಮನ ಜ್ಞಾನವು ಇಂದ್ರನಿಗೆ ಉಮಾದೇವಿಯಿಂದ ಮತ್ತು ಅನ್ಯದೇವತೆಗಳಿಗೆ ಇಂದ್ರನಿಂದ ಉಪದೇಶವಾಗುವಂತೆ ಪರಮಾತ್ಮನು ಪ್ರೇರೇಪಿಸಿ, ರುದ್ರಾದಿಗಳೊಂದಿಗೆ ಯುಕ್ತನಾಗಿ ಅಂತರ್ಧಾನನಾದನು. ಇಲ್ಲಿ ತಿಳಿದು ಬರುವ ಅಂಶವೆಂದರೆ, ಪರಮಾತ್ಮನೊಬ್ಬನೇ ಸ್ವತಂತ್ರನು,ಸರ್ವನಿಯಾಮಕನು. ಉಳಿದೆಲ್ಲ ಜೀವರಾಶಿಗಳು, ಮತ್ತು ಅಚೇತನ ಪದಾರ್ಥಗಳು ಅವನ ಅಧೀನವೇ. ಅವುಗಳ ಸಕಲ ಕಾರ್ಯಗಳು ಅವನ ಪ್ರೇರಣೆಯಿಂದಲೇ ನಡೆಯುತ್ತವೆ.

ಸಕಲ ಚೇತನಾಚೇತನ ಪದಾರ್ಥಗಳು ತಮ್ಮ ಇರುವಿಕೆಗೆ ತಮ್ಮ ಚಲನಾದಿಗಳಿಗೆ ಪರಮಾತ್ಮನ ಅಧೀನವಾಗಿವೆಯೆಂದು ಹೇಳಿರುವುದರಿಂದ, ಅವು ಪರಮಾತ್ಮನಿಂದ ಅತ್ಯಂತ ಭಿನ್ನವಾದವುಗಳೆಂದು ತಿಳಿದು ಬರುವುದು. 'ಶ್ರೋತ್ರಸ್ಯ ಶ್ರೋತ್ರಂ ......' ಎಂಬಲ್ಲಿ ತಿಳಿದು ಬರುವ ಷಷ್ಠಿ ವಿಭಕ್ತಿಯು ಪರಮಾತ್ಮ ಜೀವ, ಜಡ ಇವುಗಳ ನಡುವಿನ ಪರಸ್ಪರ ಭೇದವು ಓದುಗರ ಗಮನಕ್ಕೆ ಬರುವದು ಸಹಜವಾಗಿದೆ. ಮತ್ತು 'ಅನ್ಯದೇವ ತದ್ವಿದಿತಾದಥೊ ಅವಿದಿತಾದಧಿ' ಎಂಬಲ್ಲಿ ಇಂದ್ರಿಯಾಭಿಮಾನಿದೇವತೆಗಳು ಪರಮಾತ್ಮನನ್ನು ಸಾಕಲ್ಯೇನ ತಿಳಿಯಲು ಅಶಕ್ಯವಾದ್ದರಿಂದ, ಅವರಿಗಿಂತ ಪರಮಾತ್ಮನು ಉತ್ತಮನೂ ಮತ್ತು ಅತ್ಯಂತ ಭಿನ್ನನೂ ಎಂದು ಸಾರಭೂತವಾದ ತಾತ್ಪರ್ಯ.

ಈ ಉಪನಿಷತ್ತಿನ ಮೊದಲನೇ ಖಂಡದಲ್ಲಿ
ಯದ್ವಾಚಾನಭ್ಯುದಿತಂ
ಯೇನ ವಾಗಭ್ಯುದ್ಯತೇ ।
ತದೇವ ಬ್ರಹ್ಮ ತ್ವಂ ವಿದ್ಧಿ
ನೇದಂ ಯದಿದ ಮುಪಾಸತೇ ॥

ಎಂಬ ಶ್ಲೋಕದಿಂದ ಆರಂಭಿಸಿ ಮುಂದಿನ ಐದು ಶ್ಲೋಕಗಳಲ್ಲಿ ಜೀವೇಶ್ವರ ಭೇದವು ಅತ್ಯಂತ ಸತ್ಯವಾದುದು ಎಂದು ಉಪನಿಷತ್ತು ಸಾರಿದೆ. "ಯಾವ ಪರಬ್ರಹ್ಮವಸ್ತುವು ಸಕಲ ಇಂದ್ರಿಯಗಳಿಂದ ಅಥವಾ ಸಕಲ ಇಂದ್ರಿಯಾಭಿಮಾನಿ ದೇವತೆಗಳಿಂದ ಸಂಪೂರ್ಣವಾಗಿ ತಿಳಿಯಲು ಅಶಕ್ಯವೋ, ಮತ್ತು ಯಾವ ಪರಬ್ರಹ್ಮವಸ್ತುವಿನ ಪ್ರೇರಣೆಯಿಂದ ಎಲ್ಲ ಇಂದ್ರಿಯಗಳು—ಇಂದ್ರಿಯಾಭಿಮಾನಿದೇವತೆಗಳು ಕಾರ್ಯೋನ್ಮುಖರಾಗುವರೋ, ಅವನೇ ಸರ್ವೋತ್ತಮನಾದ ಶ್ರೀಮನ್ನಾರಾಯಣ. ಆದರೆ ಅವನು ಜೀವಸ್ವರೂಪನಲ್ಲ. ಸಕಲ ಜೀವರಾಶಿಗಳಿಗೆ ಅಂತರ್ಯಾಮಿಯಾಗಿದ್ದು ನಿಯಾಮಕನಾಗಿದ್ದಾನೆ. ಈ ಭೇದಪ್ರಮೇಯವನ್ನು 'ತಥಾ ಅನ್ಯತ್ ಪ್ರತಿಷೇಧಾತ್' (3-2-37) ಎಂಬ ಬ್ರಹ್ಮಸೂತ್ರದಲ್ಲಿ ನಿರ್ಣಯಿಸಲಾಗಿದೆ

ಹೀಗೆ ಈಶ್ವರ, ಜೀವ ಮತ್ತು ಜಡಗಳಲ್ಲಿರುವ ಪರಸ್ಪರ ಭೇದವು ಅವುಗಳ ಯೋಗ್ಯತಾ ತಾರತಮ್ಯಕ್ಕೆ ಪೋಷಕವಾಗಿದೆಯೆಂದು ಹೇಳಬಹುದು. 'ತಸ್ಮಾ ದ್ವಾ ಯತೋ ದೇವಾ ಅತಿತರಾಮಿವ ಅನ್ಯಾನ್ ದೇವಾನ್ ಯದಗ್ನಿರ್ವಾಯುರಿಂದ್ರ ಸ್ತೇಹ್ಯೇನನ್ನೇದಿಷ್ಠಂ ಪಸ್ಪರ್ಶುಃ......ಸ ಹ್ಯೇನತ್ ಪ್ರಥಮೋ ವಿದಾಂಚಕಾರ ಬ್ರಹ್ಮೇತಿ' ಎಂಬಲ್ಲಿ ಈ ಉಪನಿಷತ್ತಿನ ಶ್ಲೋಕದಲ್ಲಿ ದೇವತಾ ತಾರತಮ್ಯ ವಿಷಯವು ಸ್ಪಷ್ಟವಾಗಿ ಮೂಡಿ ಬಂದಿದೆ.

(36ನೇ ಪುಟ ನೋಡಿ)

# ದೇವಾಲಯಗಳಲ್ಲಿ ಕಾವಿಕಲೆ

ಚಿತ್ರಲೇಖನ :
ಶ್ರೀ ಎಂ. ಆರ್. ಶಾನಭಾಗ

ದೇವಾಲಯಗಳಲ್ಲಿ ಸರಳಸುಂದರ ಶೈಲಿಯ ಕಾವಿಕಲೆ ಇಂದು ಮರೆಯಾಗುತ್ತಿದೆ. ಸಿಮೆಂಟು, ಬೆಸುಗೆಗಳ ಆವಿಷ್ಕಾರದ ನಂತರ ಕಲ್ಲಿನ ಕಲೆಯೇ ಕಡಮೆಯಾಗುತ್ತಿರುವಾಗ ಕಾವಿಯ ಕಲೆಯನ್ನು ಕೇಳುವರಾರು! ಗಾರೆಯಗೋಡೆಯ ಮೇಲೆ ಚಿತ್ತಾಕರ್ಷಕವಾಗಿ ಬಿಡಿಸಿದ ಚಿತ್ರಗಳ ವಿವರಗಳನ್ನರಿಯಲು ಪ್ರಯತ್ನಿಸುವ ಮಂದಿಯನ್ನು ಈಗಲೂ ಅಲ್ಲಲ್ಲಿ ಕಾಣಬಹುದೆಂಬುದು ಸಮಾಧಾನದ ಅಂಶವಾದರೂ, ಈ ಆಸಕ್ತಿ ಅಲ್ಲಿಗೇ ನಿಲ್ಲಬಾರದೆಂಬುದೂ, ಇರುವವುಗಳ ರಕ್ಷಣೆಗಾದರೂ ಸೂಕ್ತ ಕ್ರಮಗಳನ್ನು ಕೈಗೊಳ್ಳುವತ್ತ ಗಮನ ಹರಿಸಬೇಕಾದ್ದೂ ಮುಖ್ಯ.

ಸುಣ್ಣದ ಗಾರೆಯ ಗೋಡೆಯ ಮೇಲೆ ಕಾವಿಬಣ್ಣದಿಂದ ಚಿತ್ರಗಳನ್ನು ಬಿಡಿಸುವ ಕಾವಿಕಲೆ ನಮ್ಮ ಪ್ರಾಚೀನ ಕಲೆಗಳಲ್ಲಿ ಒಂದು. ಭಾರತೀಯರು ಈ ಕಲೆಯ ಮಹತ್ತ್ವವನ್ನು ಬಹಳ ಹಿಂದೆಯೇ ಅರಿತು ಅದ್ಭುತ ಕಲಾಕೃತಿಗಳನ್ನು ರಚಿಸಿದ್ದರು ಎಂಬುದಕ್ಕೆ ಮೊಹಂಜೋದಾರೋ ಮತ್ತು ಅಜಂತಾದ ಗೋಡೆಯ ಮೇಲೆ ದೊರೆಯುವ ಭಿತ್ತಿ ಚಿತ್ರಗಳೇ ಸಾಕ್ಷಿ. ಇಂದು ಇದು ಮರೆಯಾಗುತ್ತಿರುವುದು ಬೇಸರದ ಸಂಗತಿ.

ಕರಾವಳಿ ಪ್ರದೇಶದ ನೈಸರ್ಗಿಕ ಸೊಬಗು ಒಂದು ಆಕರ್ಷಣೀಯ ನೋಟ, ಈ ಪ್ರದೇಶದ ಉದ್ದಗಲಕ್ಕೆ ಕಂಡು ಬರುವ ದೇಗುಲಗಳದ್ದೂ ಮತ್ತೊಂದು ವೈಶಿಷ್ಟ್ಯತೆ. ಬೇರೆಡೆ ಕಂಡು ಬರುವ ದೇವಾಲಯಗಳ ರೂಪಕ್ಕೂ, ಕರಾವಳಿ ಪ್ರದೇಶದ ದೇಗುಲ ವಿನ್ಯಾಸಕ್ಕೂ ಅಜಗಜಾಂತರ. ಕರಾವಳಿ ಪ್ರದೇಶದ ದೇಗುಲಗಳಲ್ಲಿ ಭಿತ್ತಿ ಚಿತ್ರ ಕಲೆಯು ವೈಭವ ಮೆರೆದಾಡಿದೆ.

ಹಸಿ ಗಾರೆಯ ಮೇಲೆ ನೀರು ಬಣ್ಣಗಳಿಂದ ರೂಪಿಸಿರುವ ಈ 'ಮಂಡೋದಕ ಕಲೆ' ಯದು ಅತಿದೀರ್ಘ ಇತಿಹಾಸ. ದೇಶ ವಿದೇಶಗಳಲ್ಲಿ ಬೆಳೆದು ಬೆಳವಣಿಗೆ ಕಂಡು ಹಂತ ಹಂತವಾಗಿ ಅಭಿವೃದ್ಧಿಗೊಳ್ಳುತ್ತಾ ಬಂದ ಈ ಕಲೆಯಲ್ಲಿ ಭಾರತೀಯರ ಪರಿಣತಿಯೇನೂ ಕಡಿಮೆಯದಲ್ಲ.

ಸಿಮೆಂಟಿನ ಗಿಲಾಯಿ ವಾಡಿಕೆಗೆ ಬರುವದಕ್ಕಿಂತ ಮೊದಲು ಸುಣ್ಣದ ಗಿಲಾಯಿ ಮುಖ್ಯವಾಗಿತ್ತು. ಇದರ ಮೇಲೆ ಕಾವಿ ಬಣ್ಣದ ರೇಖೆ ಮತ್ತು ಹುಂಡುಗಳಿಂದ ಬಿಡಿಸಿದ ಚಿತ್ರಗಳು ಅತೀ ಆಕರ್ಷಕವಾಗಿರುತ್ತಿದ್ದವು. ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಕುಮಟಾದ ಮ್ಹಾಳಸಾನಾರಾಯಣಿ ದೇವಾಲಯದ ಗೋಡೆಗಳ ಮೇಲೆ ಆಕರ್ಷಕವೂ, ಅರ್ಥಪೂರ್ಣವೂ ಆದ ಇಂಥ ಹಲವಾರು ಚಿತ್ರಗಳನ್ನು ಕಾಣಬಹುದು. ಇಲ್ಲಿಯ ಎಲ್ಲಾ ಚಿತ್ರಗಳು ಕಲಾಕಾರನ ಪ್ರೌಢಿಮೆಗೆ ಸಾಕ್ಷಿ. ಅದರಲ್ಲೂ ಸೂರ್ಯಮಂಡಳ ಮತ್ತು ಚಂದ್ರ ಮಂಡಳ ಬಿಡಿಸಿದ ಚಿತ್ರಗಳು ವಿಶಿಷ್ಟವಾಗಿವೆ. ಲಲಿತಕಲಾ ಎಕಡೆಮಿಯು ಇಲ್ಲಿಯ ಕಲೆಯನ್ನು ಸಂಗ್ರಹಿಸಿದೆ. ಹಳದೀಪುರದ ವೆಂಕಟರಮಣ ದೇವಾಲಯದಲ್ಲಿ ಕಾವಿಕಲೆಯಲ್ಲಿ ದಶಾವತಾರದ ದೃಶ್ಯಗಳ ಆಕರ್ಷಕವಾದ ಚಿತ್ರಗಳಿವೆ. ಹೆಗಡೆಯ ಶಾಂತಿಕಾಂಬಾ ದೇವಾಲಯದಲ್ಲಿ ಅಘನಾಶಿನಿಯ ಅಮ್ಮನವರ ದೇವಾಲಯದಲ್ಲಿ, ಸಿರಸಿಯ ಮಾರಿಕಾಂಬಾ ದೇವಾಲಯದಲ್ಲಿ ಆಕರ್ಷಕವಾದ ಚಿತ್ರಗಳನ್ನು ಕಾಣಬಹುದಾಗಿದೆ.

ಸುಣ್ಣದ ಗಾರೆಯ ಮೇಲೆ ಚಿತ್ರ ಬಿಡಿಸಿ ಬಣ್ಣ ಹಚ್ಚುವ ವಿಧಾನಗಳು ಹಲವಾರು ಇವೆಯಾದರೂ ಇವುಗಳಲ್ಲಿ ಜೇಡಿಮಣ್ಣಿನ ಬಣ್ಣಗಳಿಂದ ಮತ್ತು ಎಣ್ಣೆ ಬಣ್ಣಗಳಿಂದ ಚಿತ್ರಗಳನ್ನು ಅಲಂಕರಿಸುವುದು ಮುಖ್ಯವಾದವುಗಳು. ಕಾಗದದ ಮೇಲೆ ಚಿತ್ರ ಬಿಡಿಸಿ ನಂತರ ಗೋಡೆಗಳ ಮೇಲೆ ಹಚ್ಚುವುದೂ ಉಂಟು.



ಸೂರ್ಯ ಮಂಡಲ

ಕಾವಿಕಲಾ ವಿಧಾನದಲ್ಲಿ ಸುಣ್ಣದ ಹಸಿ ಗಾರೆಯ ಮೇಲೆ ಕಾವಿ ಅಥವಾ ಇತರ ಬಣ್ಣದಿಂದ ಚಿತ್ರ ಬಿಡಿಸಿ ಅವಶ್ಯವಿದ್ದಲ್ಲಿ ಬಣ್ಣದ ಲೇಪನ ಮಾಡಿ ಗಾರೆ ಒಣಗಲು ಬಿಡುವರು. ಹೀಗೆ ಗಾರೆ ಒಣಗಲು ಬಿಟ್ಟಾಗ ಗಾರೆಯೊಳಗಿನ ಸುಣ್ಣ (ಕ್ಯಾಲ್ಸಿಯಂ ಹ್ಯಾಡ್ರೊಕ್ಸಾಯ್ಡ) ಹವೆಯೊಳಗಿನ ಕಾರ್ಬಾಲಿಕ್ ಆಮ್ಲ ಹೀರಿಕೊಂಡು ಕಾರ್ಬೋನೇಟ ಆಗಿ ಗಟ್ಟಿಯಾಗುವುದು. ಇದಕ್ಕೆ ಕೂಡಿಸಿದ ಉಸುಕು ಗಾರೆ ಗಟ್ಟಿಯಾಗಲು ನೆರವಾಗುವುದು. ಗಾರೆಯು, ಒಣಗುತ್ತಿರುವಾಗ ಹಚ್ಚಿದ ಬಣ್ಣವು ಗಾರೆಯೊಡನೆ ಸಂಯೋಗವಾಗಿ ಗಾರೆಯ ಅಂಗವಾಗಿ ಶಾಶ್ವತವಾಗಿರುವುದು. ಇಟಲಿಯಲ್ಲಿ ಐನೂರು ವರುಷದ ಹಿಂದೆ ಬಿಡಿಸಿದ ಕಾವಿಕಲೆಯ ಚಿತ್ರವು ಇಂದಿಗೂ ಶುಭ್ರ ಮತ್ತು ಶೋಭಾಯಮಾನವಾಗಿದೆ. ಇಟಲಿಯಲ್ಲಿ ಚಿತ್ರಕಲೆಯ ಪುನರುಜ್ಜೀವನವಾದಾಗ ಕಾವಿಕಲೆಯು

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–00 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–00 ರಿಂದ 6–30 |
| ಸರ್ವದರ್ಶನ | ,, 5–45 ರಿಂದ 7–00 | ,, 6–30 ರಿಂದ 11–30 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಒಬ್ಬರಿಗೆ ಅನುಮತಿ ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 2/-ಶುಲ್ಕ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 11–30 ರಿಂದ 12–00 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 12–30 ರಿಂದ 6–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/-) | |
| ರಾತ್ರಿ ಗಂಟೆ | ರಾತ್ರಿ °–00 ರಿಂದ 8–30 | ರಾತ್ರಿ 6–00 ರಿಂದ 6–30 |
| ಸರ್ವದರ್ಶನ | — | ,, 6–30 ರಿಂದ 9–15 |
| ಏಕಾಂತಸೇವೆ | ,, 8–30 ರಿಂದ 9–00 | ,, 9–15 ರಿಂದ 9–30 |

**ಪೇಷ್ಕಾರ್.**

ಹೆಚ್ಚು ಜನಪ್ರಿಯವಾಗಿತ್ತು. ಈ ಕಲೆಯನ್ನು ಅವರು ಕಾಪಾಡಿಕೊಂಡು ಬಂದಿರುವುದು ಪ್ರಶಂಸನೀಯ ಇಟಾಲಿಯನ್ ರಂತೆ ಈಜಿಪ್ಷಿಯನ್ನರು, ಗ್ರೀಕರು ರೋಮನ್ನರೂ ಸಹ ಈ ಕಲೆಯನ್ನರಿತವರಾಗಿದ್ದರು. ಭಾರತೀಯರೂ ಕೂಡ ಈ ಕಲೆಯನ್ನು ಬಹಳ ವರ್ಷಗಳಿಂದ ಉಳಿಸಿಕೊಂಡು ಬಂದಿದ್ದಾರೆ.

ಒಂದೇ ಸಾರಿ ಈ ಕಲಾವಿಧಾನದಲ್ಲಿ ಮುಖ್ಯವಾದ ಅಂಶವೆಂದರೆ ಬಣ್ಣದ ಚಿತ್ರ ಬಿಡಿಸುವಾಗ ಗಿಲಾಯಿ ಒಣಗಿರಬಾರದು. ಆದುದರಿಂದ ಕಲಾಕಾರನು ಬಹುಬೇಗನೇ ಚಿತ್ರ ಬಿಡಿಸಿ ಬಣ್ಣ ಲೇಪಿಸುವ ಅರ್ಹತೆ ಹೊಂದಿರ ಬೇಕು. ಅದಕ್ಕಾಗಿ ಒಂದು ದಿನದಲ್ಲಿ ಚಿತ್ರ ಬಿಡಿಸಬಹುದಾದಷ್ಟೇ ಗಿಲಾಯಿಯನ್ನು ಲೇಪನಮಾಡಿ ಒದ್ದೆಯಾಗಿ ಇಟ್ಟುಕೊಳ್ಳುವರು. ಚಿತ್ರಗಳನ್ನು ಬೇಗೆ ಮುಗಿಸಲು ಇಟಲಿಯ ಕಲಾಕಾರರು ಕಟ್ಟಿನ ಕಾಗದದ ಚಿತ್ರಗಳನ್ನು ತಯಾರಿಸಿ ಕೊಳ್ಳುವರು. ಹೀಗೆ ತಯಾರಿಸಿದ ಚಿತ್ರಗಳಿಗೆ ಅವರು ಕಾರ್ಟೂನ್ಸ ಎಂದು ಕರೆಯುವರು. ಈ ಕಾರ್ಟೂನನ್ನು ಗಿಲಾಯಿಯ ಮೇಲೆ ಇಟ್ಟು ಬದಿಯ ರೇಖೆಗಳನ್ನು, ಮಧ್ಯದ ಬಿಂದುಗಳನ್ನು ಗುರುತಿಸುವರು. ನಂತರ ಅವುಗಳನ್ನು ಜೋಡಿಸಿ ಚಿತ್ರಗಳನ್ನು ಪೂರ್ಣಗೊಳಿಸುವರು. ಒಂದು ಸಲ ಬಣ್ಣ ಹಚ್ಚಿದ ನಂತರ ತಿರುಗಿ ಅದನ್ನು ಉಜ್ಜಲಿಕ್ಕೂ ಅದರ ಮೇಲಿನ ತಪ್ಪು ತಿದ್ದಲಿಕ್ಕು ಬರುವಂತಿಲ್ಲ.

ಇಟಲಿಯ ಕಲಾವಿದ ಒಟ್ಟೊ ವಿಲ್ಸನ್ನನ ಗಾರೆ ತಯಾರಿಸುವ ಪದ್ಧತಿಯಂತೆ ಸುಣ್ಣವನ್ನು ಒಂದು ಪ್ರಮಾಣದಲ್ಲಿ ತೆಗೆದುಕೊಂಡರೆ ಅದಕ್ಕೆ ಅದರ ಎರಡು ಪ್ರಮಾಣದಷ್ಟು ಉಸುಕನ್ನು ಕೂಡಿಸಿ ಮಿಶ್ರಣಕ್ಕೆ ಮೇಲಿಂದ ಮೇಲೆ ನೀರು ಕೊಟ್ಟು ಹಲವು ದಿನಗಳ ವರೆಗೆ ಕೊಳೆಸಿ ಹದ ತರಿಸಬೇಕು. ಬಣ್ಣವು ಬೆಳಕಿನಲ್ಲಿ ಶುಭ್ರವಾಗಿ ಕಾಣುವಂತಿರಬೇಕು. ಭೂಮಿಯ ಮೇಲೆ ಸುಲಭವಾಗ ಸಿಗುವ ಕ್ರೋಮಿಯಂ ಆಕ್ಸೈಡ್, ಕೋಬಾಲ್ಟಗ್ರೀನ, ಕೋಬಾಲ್ಟ ಬ್ಲೂ, ಎಜುರಾಟ ಈ ಮೊದಲಾದ ಬಣ್ಣಗಳನ್ನು ಬಳಸಬಹುದು.



ಗೀತೋಪದೇಶ

ಕಾವಿ ಕಲೆಯು ತಂಪು ಮತ್ತು ನೀರಿನ ಆವಿಯಿಂದ ಕೂಡಿದ ಹವಾಮಾನ ಇರುವ ಪ್ರದೇಶಗಳಲ್ಲಿ ಅಷ್ಟೊಂದು ಬಾಳಿಕೆ ಬರುವುದಿಲ್ಲ. ಆದ್ದರಿಂದ ಯುರೋಪಿನಲ್ಲಿ ಈ ಕಲೆಯು ಅಷ್ಟೊಂದು ಪ್ರಾಮುಖ್ಯತೆಯನ್ನು ಪಡೆದಿಲ್ಲ. ಇಟಲಿಯಲ್ಲಿ ಕಾವಿ ಕಲೆಯು 15 ನೇ ಮತ್ತು 16 ನೇ ಶತಮಾನದಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದಿತ್ತು. ಸಿಮೆಂಟ್ ಬಳಕೆಗೆ ಬಂದ ಹಾಗೆ ಈ ಕಲೆಯು ಮಾಯವಾಗುತ್ತ



ಚಂದ್ರಮಂಡಳ

ಬಂದಿತು. ಆದಿವಾಸಿಗಳಿಂದ-ಭಾರತೀಯರು ಈ ಕಲೆಯ ಮಹತ್ತ್ವವನ್ನು ಪ್ರಾಚೀನಕಾಲದಲ್ಲಿಯೇ ಅರಿತು ಅನೇಕ ಅದ್ಭುತ ಕೃತಿ ನಿರ್ಮಾಪಕರಾಗಿದ್ದರೆಂಬುದಕ್ಕೆ ಮೊಹೆಂಜೋದಾರೋ ಮತ್ತು ಅಜಂತಾದ ಗೋಡೆಗಳ ಮೇಲೆ ದೊರೆಯುವ ಭಿತ್ತಿಚಿತ್ರಗಳು, ಕೃತಿಗಳು ಆಧಾರವಾಗಿವೆ.ಗ್ರೀಕರು ಕಾವಿಯನ್ನು ಬಳಸಿ ಸುಣ್ಣದ ಗಾರೆ ಸವರಿದ ನೆಲದ ಮೇಲೋ, ಗೋಡೆಯ ಮೇಲೋ ಚಿತ್ರ ಬಿಡಿಸಿ ಕಲೆಯನ್ನು ಸವಿಯುತ್ತಿದ್ದರು. ಗ್ರೀಕರುಈ ಕಲೆಯನ್ನು ಪರ್ಶಿಯನ್ ರಿಂದ ಕಲಿತಿರಬೇಕೆಂದು ಹೇಳಲಾಗುತ್ತದೆ. ಭಾರತದ ಮಧ್ಯ ಪ್ರದೇಶದ ಕೈಮೂರು, ಮಹಾದೇವ ಮೊದಲಾದ ಪರ್ವತ ಪ್ರದೇಶದ ಬಂಡೆ ಯಾಸರೆಗಳಲ್ಲಿ ಅಲ್ಲಿಯ ಆದಿವಾಸಿಗಳು ಕ್ರಿ. ಪೂ. ಸಾವಿರಾರು ವರ್ಷಗಳಿಂದ ಕ್ರಿ. ಶ. ಕೆಲವು ಶತಮಾನಗಳ ನಂತರವೂ ಬರೆದ ಅಸಂಖ್ಯ ರೇಖಾಚಿತ್ರಗಳಿವೆ. ಇವರು ಆ ಕಾಲದಲ್ಲಿ ನೋಡಲು ಸಿಗುವ ವನ್ಯಮೃಗಗಳಾದ ಚಿಂಕೆ, ಖಡ್ಗಮೃಗ, ಹರಿಣ, ಇವುಗಳನ್ನು ತಮ್ಮ ಕೃತಿಯ ವಸ್ತುಗಳನ್ನಾಗಿ ಬಳಸುತ್ತಿದ್ದರು. ಅನಂತರದ ಕಾಲದಲ್ಲಿ ಗೌತಮ ಬುದ್ಧನ ವೈರಾಗ್ಯ ಪೂರ್ವದ ಹಾಗೂ ನಂತರದ ಕಥಾನಕಗಳಿವೆ. ಇತ್ತೀಚೆಗೆ ರಾಮಾಯಣ ಮತ್ತು ಮಹಾಭಾರತದ ಕಥಾನಕಗಳೊಡನೆ ಸೂರ್ಯಮಂಡಳ ಮತ್ತು ಚಂದ್ರಮಂಡಲಗಳಂಥ ವಿಶಿಷ್ಟ ವಾದ್ಯ ಚಿತ್ರಗಳನ್ನು ಕಾಣಬಹುದಾಗಿದೆ.

ಇಂದು ಕರಾವಳಿಯುದ್ದಕ್ಕೂ ಹೆಚ್ಚಿನ ದೇವಾಲಯಗಳ ಗೋಡೆಗಳ ಮೇಲೆ ಈ ಕಾವಿ ಕಲೆಯು ಕಂಡು ಬರುವುದಾದರೂ ಅದರ ಕಡೆಗೆ ಹೆಚ್ಚಿನ ಗಮನ ಹರಿಸದೇ ಧೂಳು, ಹೊಗೆ, ಮಳೆ ಮೊದಲಾದವುಗಳಿಂದ ಚಿತ್ರಗಳು ಹಾಳಾಗುತ್ತಲಿವೆ. ಇಂದಿನ ಸಿಮೆಂಟು ಗಿಲಾಯಿಯಿಂದ ಅವು ತಮ್ಮ ಸ್ಥಾನವನ್ನು ಕಳೆದುಕೊಳ್ಳುತ್ತಲಿವೆ. ಕಾಲಮಾನ ಬದಲಾ



ದ್ರೌಪದಿ

ದಂತೆ ಪರಿಸರವೂ ಬದಲಾಗುವದೆಂಬುದಕ್ಕೆ ಇದೆಂದು ಉದಾಹರಣೆ. ಆದರೆ ಈ ಕಾವಿಕಲೆಯಲ್ಲಿಯು ಜೀವಕಳೆಯನ್ನು ಹಳೆಯ ಚಿತ್ರಗಳನ್ನೇ ನೋಡಿ ಸವಿಯಬೇಕಷ್ಟೆ! ಜೀವ ಕಳೆದು ಕೊಳ್ಳುತ್ತಿರುವ ಈ ನಮ್ಮ ಪುರಾತನ ಕಾವಿ ಕಲೆಗೆ ಜೀವಕಳೆ ತುಂಬುವುದು ತೀರ ಅವಶ್ಯ



ನಕುಲಸಹದೇವರು

## ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ,

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ಕೋಲು ಹಾಡು

ದ್ವಿತೀಯ ಘಟ್ಟದ ದಾಸಸಾಹಿತ್ಯದ ಕೇಂದ್ರ ವ್ಯಕ್ತಿಯಾದ ವಿಜಯದಾಸರ ಸಾಕುಮಗ ಹಾಗೂ ಶಿಷ್ಯ ಮೋಹನದಾಸರು. ಮೋಹನದಾಸರ 'ಕೋಲುಹಾಡು', ಜಾನಪದ ಧಾಟಿಯಲ್ಲಿರುವ, ಸ್ವಾರಸ್ಯವಾದ ಸಂಭಾಷಣೆಯಿಂದ ಕೂಡಿರುವ, 217 ಪದ್ಯಗಳನ್ನೊಳಗೊಂಡಿರುವ ಪುಟ್ಟಕಾವ್ಯ. ರುಕ್ಮಿಣಿ–ಸುಭದ್ರೆ, ಕೃಷ್ಣ–ಅರ್ಜುನರ ಸರಸ ಸಲ್ಲಾಪವೇ ಈ ಕೃತಿಯ ಪ್ರಮುಖವಸ್ತು ಹಾಗೂ ಆಕರ್ಷಣೆ. ಕವಿಯೇ ಈ ಅಂಶವನ್ನು ಕೆಳಗಿನ ಪದ್ಯದಲ್ಲಿ ಹೇಳುತ್ತಾರೆ:

ಶ್ರೀಕೃಷ್ಣ ಅರ್ಜುನ ಸುಭದ್ರೆ ರುಗ್ಮಿಣಿ
ಸಾಕಾರವಾಗಿ ಸರಸವ ಕೋಲೆ
ಸಾಕಾರವಾಗಿ ಸರಸವಾಡಿದ ಕಥೆ
ಸಾಕಲಿ ನಮ್ಮ ಸರ್ವದಾ ಕೋಲೆ

ಕೃತಿಯ ವಸ್ತುವೇನೆಂದು ಮೇಲೆ ಹೇಳಿದ್ದರೂ, ಕೃತಿಯ ಅರ್ಧಭಾಗವನ್ನೆಲ್ಲ ವಿನಾಯಕ, ಹರಿ, ಬ್ರಹ್ಮ ಮೊದಲಾದ ದೈವಗಳ ಸ್ತುತಿಗೂ, ಮಧ್ವರೇ ಆದಿಯಾಗಿ, ವಿಜಯದಾಸರ ವರೆಗಿನ ದಾಸ ಪರಂಪರೆಯ ಮಹಿಮೆಯನ್ನು ಕೊಂಡಾಡಲೂ ಬಳಸಿಕೊಳ್ಳಲಾಗಿದೆ. ವಿವಿಧ ದೇವರುಗಳ ಸ್ತುತಿಮಾಡುವಾಗ ಮೋಹನ ದಾಸರು ಹರಿಯಸ್ತುತಿಗೆ ಹೆಚ್ಚು ಗಮನ ನೀಡಿದ್ದಾರೆ. ಹರಿಯ ಸ್ತುತಿಮಾಡುತ್ತಲೆ ದ್ವೈತಮತದ ಪ್ರಮುಖತತ್ತ್ವಗಳ ಸಾರವನ್ನು ಭಟ್ಟಿಯಿಳಿಸಿರುವುದು ಇಲ್ಲಿನ ವೈಶಿಷ್ಟ್ಯ.

ಹರಿಸ್ತುತಿಯ ವಿಭಾಗದಲ್ಲಿ ವ್ಯಕ್ತವಾಗುವ ಪ್ರಮುಖ ಅಂಶಗಳಿಷ್ಟು: ಈತ, ಬ್ರಹ್ಮರ ನಿಯಾಮಕನಾದ ಶ್ರೀಹರಿ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣ. ಸಮಸ್ತ ಜೀವ ಕೋಟಿ, ದೇವಕೋಟಿಗಳಿಗೂ ಒಡೆಯ ಹರಿಯೇ. ವೇದವೃಂದ ಪ್ರತಿಪಾದ್ಯನಾದ ಈತ ಸರ್ವವ್ಯಾಪಿ. ಕ್ಷರಾಕ್ಷರಗಳಲ್ಲಿ ಪರಮೋತ್ತಮನಾದ ವಿಷ್ಣು ಮುದ್ದು ಮೊಗದ ದೈವ. ಸದ್ವೈಷ್ಣವರನ್ನು ಪೊರೆಯುವವನು. ಸಚ್ಚಿದಾನಂದ ಸ್ವರೂಪನೂ, ಸಕಲಗುಣ ಪರಿಪೂರ್ಣನೂ ಆದ ಶ್ರೀಹರಿ ಬಹಳ ದಯಾಮಯಿ. ಆಪದ್ಬಾಂಧವ. ವಿವಿಧ ಲೀಲೆ ಗಳನ್ನು ತೋರಲು ಭೂಲೋಕದಲ್ಲಿ ದಶಾವತಾರ ಗಳನ್ನು ತಳೆದಿದ್ದಾನೆ

ಮಚ್ಛ ಕೂರುಮ ವರಾಹ ನರಸಿಂಹ ವಾಮನ
ಸ್ವಚ್ಛ ಭೃಗುರಾಮ ರಘುರಾಮ ಕೋಲೆ
ಸ್ವಚ್ಛ ಭೃಗುರಾಮ ರಘುರಾಮ ಕೃಷ್ಣಬುದ್ಧ
ಅಚ್ಚ ಕಲ್ಕಿಯ ಬಲಗೊಂಬೆ ಕೋಲೆ

ಹರಿಯ ದಶಾವತಾರಗಳಲ್ಲಿ ಕೃಷ್ಣಾವತಾರವನ್ನು ಮೋಹನದಾಸರು ವಿಶೇಷವಾಗಿ ಕೊಂಡಾಡಿದ್ದಾರೆ. ಕೃಷ್ಣನ ವಿಧವಿಧವಾದ ಲೀಲೆಗಳನ್ನು ಮನೋಹರವಾಗಿ ವರ್ಣಿಸುತ್ತ, ದ್ವಾರಕಾಪಟ್ಟಣದ ಸೌಂದರ್ಯವನ್ನು ವರ್ಣಿಸಿದ್ದಾರೆ. ವರ್ಣನೆಗೆ ಮೀರಿದ, ಸುಂದರಪಟ್ಟಣವಾದ ದ್ವಾರಕೆ, ಹರಿಗೆ ಅಧೀನರಾದ ಸಕಲ ದೈವಗಳಿಂದ ತುಂಬಿ, ಎಲ್ಲೆಲ್ಲು ವಿಷ್ಣು ಭಕ್ತಿಯ ವಾತಾವರಣದಿಂದ ವಿಜೃಂಭಿಸುತ್ತಿತ್ತು. ಈ ಮಾತಿಗೆ ಪುಷ್ಟಿಯೋ ಎಂಬಂತೆ, ಹರಿಯ ಅರಮನೆಯ ಹೆಬ್ಬಾಗಿಲಲ್ಲಿ ಯಾವಾಗಲು ಕೇಳಿಸುತ್ತಿದ್ದ ಧ್ವನಿಯಿದು:

ಹರಿಯೆ ಸರ್ವೋತ್ತಮ, ಹರಿಯೆ ಪರದೇವತೆ
ಹರಿದಾಸರೆಂಬೋ ಬಿರುದಿನ ಕೋಲೆ
ಹರಿದಾಸರೆಂಬೋ ಬಿರುದಿನ ಹೆಗ್ಗಾಳೆ
ಹಿರಿಬಾಗಿಲೊಳು ಹಿಡಿಸಿಹರು ಕೋಲೆ

ಮತದೊಳು ಮಧ್ವಮತ ವ್ರತದೊಳು ಹರಿದಿನ
ಕಥೆಯೊಳು ಭಾಗವತವೆನ್ನಿ ಕೋಲೆ
ಕಥೆಯೊಳು ಭಾಗವತವೆನ್ನಿ ಇದರಂತೆ
ಪ್ರತಿಮೆಯೊಳ್ ವಿಷ್ಣು ಪ್ರತಿಮೆನ್ನಿ ಕೋಲೆ

ಹೀಗೆ ದ್ವಾರಕೆಯ ವರ್ಣನೆ ಮಾಡಿದ ಮೇಲೆ 26 ಪದ್ಯಗಳಲ್ಲಿ ಹರಿ ನೆಲೆಸಿರುವ ವೈಕುಂಠದ ವರ್ಣನೆ ಮಾಡಲಾಗಿದೆ:

ಅಪ್ಪನಾರಾಯಣ ನಿಷ್ಪಂಥ ಅರಮನೆ
ಅಪ್ರಾಕೃತದ ವೈಕುಂಠ ಕೋಲೆ
ಅಪ್ರಾಕೃತದ ವೈಕುಂಠವೆಂಬೋದು
ಸ್ವಪ್ರಕಾಶದ ಪರಮಾತ್ಮ ಕೋಲೆ

ಇಲ್ಲಿ ಪಂಚವಿಧ ತಾರತಮ್ಯಗಳನ್ನು, ಭಕ್ತರಿಗೆ ಸಿಗಬಹುದಾದ ಸಾರೂಪ್ಯ, ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರಿಷ್ಟಿ ಎಂಬ ಪಂಚ ವಿಧ ಮುಕ್ತಿಯನ್ನು ಹೇಳಲಾಗಿದೆ. ಆದರೆ ಸಾರಿಷ್ಟಿ ಎಂಬ ಮುಕ್ತಿ ವಿರಿಂಚಿಯೊಬ್ಬನಿಗೆ ಮಾತ್ರ.

ಇಲ್ಲಿಂದ ಮುಂದೆ, ಮೋಹನದಾಸರು ಸುಭದ್ರೆ ರುಕ್ಮಿಣಿ, ಕೃಷ್ಣಾರ್ಜುನರ ಸರಸಸಲ್ಲಾಪದ ಚಿತ್ರಣ ಕೊಡುತ್ತಾರೆ. ಈ ಸಂಭಾಷಣೆಯ ಪರಮೋದ್ದೇಶ ಶ್ರೀಹರಿ–ರುಕ್ಮಿಣಿಯರ ಹಿರಿಮೆ ಗರಿಮೆಗಳನ್ನು ಸಾರುವುದು. ಅರ್ಜುನನ ಬಾಯಲ್ಲಿ ಬರುವ ಮಾತುಗಳೆಲ್ಲ ಭಕ್ತನೊಬ್ಬ ನಿಂದಾ ಸ್ತುತಿಯ ಮೂಲಕ, ಪರಮಾತ್ಮನಲ್ಲಿ ತನಗಿರುವ ಭಕ್ತಿ, ಮೆಚ್ಚುಗೆಗಳನ್ನು ಸೂಚಿಸುವುದೇ ಆಗಿದೆ. ಕೃತಿಯಲ್ಲಿನ ಈ ಭಾಗವಂತೂ ಹಾಸ್ಯಮಯವಾಗಿದ್ದು, ಬಹಳ ಹೃದಯಸ್ಪರ್ಶಿಯಾಗಿದೆ.

ಒಂದುದಿನ ಸುಭದ್ರೆ ಅಣ್ಣನ ಮನೆಗೆ ಬಂದಳು. ಅವಳ ಅದೃಷ್ಟಕ್ಕೆ ರುಕ್ಮಿಣಿ ಎಲ್ಲೋ ಹೊರಟು ಹೋಗಿದ್ದಳು. ಎಷ್ಟುಹೊತ್ತಾದರೂ ಬರಲಿಲ್ಲ. ಸತ್ಯಭಾಮೆ ಮಾತ್ರ ಇದ್ದಳು ಸುಭದ್ರೆಗೂ ಕಾದುಕಾದು ಸಾಕಾಯಿತು ರುಕ್ಮಿಣಿಯನ್ನು ಲೇವಡಿಮಾಡುವ ಮನಸ್ಸಾಯಿತು.

ಅತ್ತಿಗೆ ಮನೆಗೆ ಬಂದು ಹತ್ತು ಘಳಿಗಾಯಿತು
ಎತ್ತ ಓಡಿದಳೋ ನಮಗಂಜಿ ರುಗ್ಮಿಣಿ
ಇತ್ತ ಬಾ ಅಭಯ ಕೊಡುತೇನೆ ಕೋಲೆ

ರುಕ್ಮಿಣಿಯನ್ನು ಹಾಸ್ಯಮಾಡುವ ಮತ್ತೊಂದು ಪದ್ಯ ನೋಡಿ:

ಅತ್ತಿಗೆ ನಿನ್ನ ಮೈಗೆ ಹತ್ಯವೆ ರುದ್ರಾಕ್ಷಿ
ನೆತ್ತಿ ಮೇಲೆಲ್ಲ ಜಡೆಗಳು ಕೋಲೆ
ನೆತ್ತಿ ಮೇಲೆಲ್ಲ ಜಡೆಗಳು ನಿನ್ನ ಜನ
ಅರ್ಥಿಲಿ ನೋಡಿ ನಗುತಾರೆ ಕೋಲೆ

ಅಂತೂ, ಎಷ್ಟೋಹೊತ್ತಾದಮೇಲೆ ರುಕ್ಮಿಣಿ ಬಂದಳು. ಬಂದವಳೇ,

ಬಂದಬೀಗಿತ್ತಿಯ ಚಂದದಿದಿರ್ಗೊಂಡು
ಮಂದಹಾಸದಲಿ ನುಡಿಸ್ಯಾಳೆ ಕೋಲೆ
ಚಂದದಿದಿರ್ಗೊಂಡು ನುಡಿಸ್ಯಾಳೆ ರುಗ್ಮಿಣಿ
ಬಂದವರು ಯಾರಾ ಮನೆಯವರು ಕೋಲೆ

ಅದಕ್ಕೆ ಸುಭದ್ರೆ, ಬಂದವಳು ಶುಂಡಾಲನಗರದ ಪಾಂಡುಭೂಪರ ಸೊಸೆ, ಗಂಡುಗಲಿ ಪಾರ್ಥನ ಅರ್ಧಾಂಗಿಯೆಂದು ಹೇಳಿ, ಅದುಸರಿ, ನೀನೇಕೆ ಇಷ್ಟು ಹೊತ್ತು ನಮ್ಮನ್ನು ಕಾಯಿಸಿದೆ ಎಂದು ತರಾಟೆಗೆ ತೆಗೆದುಕೊಂಡಳು. ಅಲ್ಲದೆ, ಎಲ್ಲೋ ನಮ್ಮಣ್ಣನ ಪ್ರೀತಿ ನಿನಗೆ ಹೆಚ್ಚಾಗಿರಬೇಕು, ಎಷ್ಟಾದರೂ ಅವನೊಂದಿಗೆ ನೀನು ಓಡಿಬಂದವಳಲ್ಲವೆ ಎಂದು ಛೇಡಿಸಿದಳು;

ಓಡಿಬಂದವಳು ಒಳಗೆ ಸೇರಿಕೊಂಡು
ನೋಡುವಳೆ, ನಮ್ಮ ನುಡಿಸುವಳೆ ಕೋಲೆ
ನೋಡುವಳೆ, ನಮ್ಮ ನುಡಿಸುವಳೆ ನಮ್ಮಣ್ಣ
ಮಾಡಿದ ಮೋಹ ತಲೆಗೇರಿತು ಕೋಲೆ

ಸುಭದ್ರೆಯ ನುಡಿಗಳನ್ನು ಕೇಳಿ, ರುಕ್ಮಿಣಿಯೂ ಕೊಂಚ ಕೆರಳಿದಳು. ಅತ್ತೆಯ ಮಗಳೆಂದು ನೀನು ಹೇಳಿದ್ದನ್ನೆಲ್ಲ ತಾಳಿದೆ. ತಾಳು, ಸರಿಯಾಗಿ ನಿನಗೂ ಪ್ರತಿಹೇಳುತ್ತೇನೆ ಎಂದು ಮನದಲ್ಲೇ ಯೋಚಿಸಿಕೊಂಡು,

ಅಣ್ಣನ ವಂಚಿಸಿ ಓಡಿಬಂದವಳೆಂದು
ಎನ್ನ ನೀನುಡಿವೆ ಸುಭದ್ರೆ ಕೋಲೆ

ಶ್ರೀಮತಿ ಎನ್. ಪುಷ್ಪ

ಎನ್ನ ನೀ ನುಡಿವೆ ಸುಭದ್ರೆ ಕೇಳು ನಾ
ಸನ್ಯಾಸಿಯೊಡನೆ ಬರಲಿಲ್ಲ ಕೋಲೆ

ಎಂದು ಮರು ಏಟುಕೊಟ್ಟಳು. ಅಲ್ಲದೆ, ಒಂದನ್ನು ಹೇಳಲು ಹೋಗಿ ಹನ್ನೊಂದನ್ನಿಕೊಂಡೆಯಲ್ಲೆ ಸುಭದ್ರೆ, ಇದರಿಂದ ನಿನ್ನ ಬಣ್ಣ ಮತ್ತಷ್ಟು ಕಡಿಮೆಯಾಯಿತು. ನಾನೆಲ್ಲಿ ನೀನೆಲ್ಲಿ? ಆನೆಗೂ, ಆಡಿಗೂ ಸಮನೇ?

ಆನೆಯು ಸಂಗಡ ಆಡುಹುಲ್ಲು ಮೆದ್ದರೆ
ಆನೆ ಹಿಂಗಾಲಲ್ಲೊದೆಯದೆ ಕೋಲೆ
ಆನೆ ಹಿಂಗಾಲಲ್ಲೊದೆಯದೆ ಸುಭದ್ರೆ
ರಾಣಿ ರುಗ್ಮಿಣಿಗೆ ಸರಿಯೇನೆ ಕೋಲೆ

ಆದ್ದರಿಂದ 'ಬಂದ್ದಾರಿ ಹಿಡಿದು ಸುಮ್ಮನೆ ಮನೆ–ಗ್ಹೋಗು' ನನ್ನ ತಂಟೆಗೆ ಬರಬೇಡವೆಂದು ತೀಕ್ಷ್ಣವಾಗಿ ನುಡಿದಳು.

ರುಕ್ಮಿಣಿ ಸುಭದ್ರೆಯರ ಸಂವಾದವನ್ನು ಕೇಳಿ, ಒಳ್ಳೇಮಲಗೆ ನಿದ್ರಿಸುತ್ತಿದ್ದ ಕೃಷ್ಣ ಮೇಲೆದ್ದ. ಹತ್ತಿರ ಕುಳಿತಿದ್ದ ಅರ್ಜುನನನ್ನು ನೋಡಿ, ಅವನಿಗೂ ಜಗಳವಾಡುವ ಮನಸ್ಸಾಯಿತು. ರೇಗಿಸಲು ಪ್ರಾರಂಭಿಸಿದ. ಅರ್ಜುನನೊಂದಿಗೆ ಮಾತಿಗೆ ಮಾತು ಬೆಳೆಸಿ, ಏನಾದರೂ ನಿನ್ನಂತಹವನಿಗೆ ಸುಭದ್ರೆ ಸರಿಯಲ್ಲ ಬಿಡು, 'ಕನಕ ಕಬ್ಬಿಣಕೆ ಸರಿಯುಂಟೆ' ಎಂದು ಕೆಣಕಿದ;

ದನಗಾವಿ ನೀನೆತ್ತ, ವನಜಕುಸುಮವೆತ್ತ
ಕನಕ ಕಬ್ಬಿಣಕೆ ಸರಿಯುಂಟೆ ಕೋಲೆ
ಕನಕ ಕಬ್ಬಿಣಕೆ ಸರಿಯುಂಟೆ ಅರ್ಜುನ
ನಿನಗೆ ಸುಭದ್ರೆ ಸರಿಯೇನೊ ಕೋಲೆ

ಹೀಗೆ ಅಂದಿದ್ದೆ ತಡೆ, ಅರ್ಜುನನಿಗೂ ರೇಗಿತು. ಕೈಲಾದಷ್ಟು, ಚೆನ್ನಾಗಿ ವ್ಯಂಗ್ಯಮಾಡುತ್ತ ಕೃಷ್ಣನನ್ನು ನಿಂದಿಸಲಾರಂಭಿಸಿದ. ಅರ್ಜುನನ ಈ ನಿಂದಾಸ್ತುತಿ ಭಕ್ತ ಭಗವಂತರ ನಡುವಿನ ಸಲಿಗೆಯು ಸ್ನೇಹಭಾವಕ್ಕೆ ಉತ್ತಮ ನಿದರ್ಶನವಾಗಿದ್ದು, ಕೇಳಲು ಸರಸಮಯವಾಗಿದೆ.

ರುಕ್ಮಿಣಿಯೂ ಕೃಷ್ಣನಿಗೆ ಸರಿಯಲ್ಲವೆಂಬುದು ಅರ್ಜುನನವಾದ. ನನ್ನನ್ನು ದನಗಾವಿ ಎಂದೆಯಲ್ಲ, ದನಗಾವಿ ನಾನೋ ನೀನೋ ಯೋಚಿಸು, ನನಗೆ ಈ ಪದವೇ ಮರೆತುಹೋಗಿತ್ತು ನೀನೆ ನೆನಪಿಸಿದೆಯಲ್ಲೊ ಭಾವಯ್ಯ ಎಂದು ಮಾತಿಗಾರಂಭಿಸಿದ.

ಗೋಪಾಲ ಕಟಾರ್ಥ ನೀ ಕೇಳು ಭಾವಯ್ಯ
ಕೋಪವಿನ್ಯಾಕೆ ಎನ್ನ ಮೇಲೆ ಕೋಲೆ
ಕೋಪವಿನ್ಯಾಕೆ ಎನ್ನ ಮೇಲೆ ನಿನ್ನ ಮಹಿಮೆ
ನೀ ಹೇಳಿಕೊಂಡೆ ನಿಶ್ಶಬ್ದ ಕೋಲೆ

ಎಲ್ಲಬಿಟ್ಟು, ಸಿರಿದೇವಿಯನ್ನು ಆ ಸಮುದ್ರರಾಜ ನಿನಗೆ ಕೊಟ್ಟನಲ್ಲ, ಅವನು ನಿಜವಾಗಿ ಕಣ್ಣು ಕಾಣದ ಹೆಡ್ಡ. ಸಿರಿದೇವಿಯನ್ನು ನಾಳುವ ಶಕ್ತಿ ನಿನಗಿದೆಯೇ? ಕೈಯಲ್ಲಿ ಒಂದು ಕಾಸಿಲ್ಲ, ಮನೆಯಿಲ್ಲ. ನಿಲ್ಲಲು ಸ್ಥಳವಿಲ್ಲ. ಬಲಿಯೇ ಇದಕ್ಕೆ ಸಾಕ್ಷಿ

ಕೊಟ್ಟರೇನಾಯಿತು ಇಟ್ಟಾಣೆ ಇಂಬಿಲ್ಲ
ಹುಟ್ಟು ಗತಿಯಂತು ಮೊದಲಿಲ್ಲ ಕೋಲೆ
ಹುಟ್ಟು ಗತಿಯಂತು ಮೊದಲಿಲ್ಲ ದಾನವ
ಕೊಟ್ಟ ಬಲೀಂದ್ರನಿದಕೆ ಸಾಕ್ಷಿ

ಹೋಗಲಿ ನಿನಗೆ ಕುಲಗೋತ್ರಗಳಾದರೂ ಇದೆಯೇ? ಅದೂ ಇಲ್ಲ.

ಕುಲವಿಲ್ಲ, ಗೋತ್ರವಿಲ್ಲ, ನೆಲೆಯಿಲ್ಲ, ಚಾರವಿಲ್ಲ
ಬಲುದೈತ್ಯರೊಳು ಹಗೆಗಾರ ಕೋಲೆ
ಬಲುದೈತ್ಯರೊಳು ಹಗೆಗಾರಿಂಥವಗೆ
ಜಲಧೀಶ ಮಗಳ ಕೊಡಬಹುದೆ ಕೋಲೆ

ಹಣಬೇಡ, ಕುಲಬೇಡ, ನೆಲಬೇಡ. ಮೈಯಲ್ಲಿ ಶಕ್ತಿಯಾದರೂ ಇದೆಯೇ ಎಂದರೆ, ನೀನೋ, ಬಹಳ ಮುದುಕ. ನಿನಗೆ ಒಬ್ಬಳು ಹೆಂಡತಿ ಸಾಲದು ಲೆಕ್ಕವಿಲ್ಲದಷ್ಟು ಹೆಂಡಂದಿರನ್ನಿಟ್ಟುಕೊಂಡಿರುವೆ. ಜೊತೆಗೆ ಅನೇಕಮಂದಿ ಮಕ್ಕಳು ಬೇರೆ ಕಡೆಗೆ, ನೀನು ರೂಪವಂತನೇ ಎಂದು ನೋಡಿದರೆ, ಅದೂ ಇಲ್ಲ. ಕುದುರೆ ಮೂತಿ, ಉರಿಗಣ್ಣು ನೀನು, ನಿನ್ನ ಮನೆ ಸಮುದ್ರ ಹಾಸಿಗೆ ಹಾವು ಅಂದರೆ ಮಲಗಲು ನಿನ್ನ ಮಂಚವೆಂದರೆ ಹಾವು. ನೀನು ಓಡಾಡುವುದೋ ಹದ್ದಿನಮೇಲೆ. ಹದ್ದು ಹಾರಾಡುವಾಗ ನೀನು ಬಿದ್ದರೆ ಗತಿಯೇನು? ಇಂತಹ ಹಣೆಬರಹ ಹೊಂದಿಯೂ ನಿನಗೆ ಅಹಂಕಾರ ಬೇರೆ. ಆದ್ದರಿಂದಲೇ ಭೃಗು ನಿನ್ನನ್ನು ಕಾಲಿಂದ ಒದ್ದ, ಶಿಶುಪಾಲ ಸಭೆಯೊಳಗೆ ಬೈದ.

ಇನ್ನು, ತಲೆಯಿಲ್ಲದ ಈ ಲೋಕ ನಿನ್ನನ್ನು ದಾನವಾಂತಕನೆಂದು ಹೊಗಳುತ್ತದೆ. ನೀನು

(27 ನೇ ಪುಟ ನೋಡಿ)

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು

### ಅರ್ಜಿತ ಸೇವಾ ವಿವರ

| | | | | |
|---|---|---|---|---|
| 1. | ದರ್ಶನ: | ವಿಶೇಷ ಪ್ರವೇಶಃ ಪ್ರತಿಯೊಬ್ಬರಿಗೆ | ರೂ | 2–00 |
| 2. | ಅರ್ಜಿತ: | ಕಾಲಸೋಲ 1) ಪೊಂಗಲ್ | ರೂ | 110–00 |
| | | 2) ಪುಳಿಯೋಗರೆ | ರೂ | 100–00 |
| | | 3) ದಧ್ಯೋದನ | ರೂ | 75–00 |
| | | 4) ಕೇಸರಿಬಾತ್ | ರೂ | 180–00 |
| | | 5) ಸಕ್ಕರೆ ಪೊಂಗಲ್ | ರೂ | 135–00 |
| | | 6) ದೋಸೆ | ರೂ | 300–00 |
| | | 7) ಶಾಕರಬಾತ್ | ರೂ | 150–00 |
| | | 8) ಸೀರಾ | ರೂ | 300–00 |
| 3. | ಸೇವೆಗಳು | 1) ತಿರುಪ್ಪಾವಡಾ | " | [illegible]000–00 |
| | | (ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯಪದಕ ಬಹುಮಾನ.) | | |
| | | 2) ಸಹಸ್ರನಾಮಾರ್ಚನೆ | ರೂ | 6–00 |
| | | 3) ಅಷ್ಟೋತ್ತರ ಶತನಾಮಪೂಜೆ | ರೂ | 1–50 |
| | | 4) ಅಭಿಷೇಕ (ಶುಕ್ರವಾರ, ಒಬ್ಬರಿಗೆ) | ರೂ | 100–00 |
| | | 5) ಊಂಜಲ್ ಸೇವೆ ( ,, ಸಂಜೆ) | ರೂ | 150–00 |
| | | 6) ತಿರುಚ್ಚಿ ಉತ್ಸವ | ರೂ | 63–00 |
| | | 7) ಗಜವಾಹನ | ರೂ | 32–00 |

—ಹೇಷ್ಕಾರ್

# ಕರ್ನಾಟಕ ಸಂಗೀತದ ತ್ರಿಮೂರ್ತಿಗಳು

ಡಾ|| ಎನ್. ಅನಂತರಂಗಾಚಾರ್

ಕರ್ನಾಟಕಸಂಗೀತದ ತ್ರಿಮೂರ್ತಿಗಳೆಂದು ಪ್ರಸಿದ್ಧರಾದ ತ್ಯಾಗರಾಜ, ಮುತ್ತುಸ್ವಾಮಿ ದೀಕ್ಷಿತರು ಮತ್ತು ಶ್ಯಾಮಾಶಾಸ್ತ್ರಿಗಳು ೧೮ ನೆಯ ಶತಮಾನದ ಉತ್ತರಾರ್ಧ ಮತ್ತು ೧೯ ನೆಯ ಶತಮಾನದ ಪೂರ್ವಾರ್ಧದಲ್ಲಿ ಇದ್ದವರು. ಇವರು ಮೂವರು ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಉದ್ದಾಮ ಪಂಡಿತರು. ಇವರೆಲ್ಲರೂ ಸಮಕಾಲೀನರು ಮತ್ತು ತಂಜಾವೂರು ಜಿಲ್ಲೆಯವರು. ತಿರುವಾರೂರಿನಲ್ಲಿ ಜನಿಸಿದವರು. ಸಂಗೀತ ಸಾಮ್ರಾಜ್ಯದಲ್ಲಿ ಹೊಸತನವನ್ನು ಸ್ಥಾಪಿಸಿ ಮುಂದಿನ ಸಂಗೀತಜ್ಞರ ಪೀಳಿಗೆಗೆ ಮಾರ್ಗದರ್ಶಕರಾಗಿದ್ದಾರೆ. ತಮ್ಮ ಅದ್ಭುತವಾದ ಜ್ಞಾನಭಕ್ತಿ ವೈರಾಗ್ಯಯುತವಾದ ಶ್ರೇಷ್ಠ ಪ್ರತಿಭೆಯಿಂದ ಹೊಸರಾಗಗಳನ್ನು ಸಂಶೋಧಿಸಿ ಕೃತಿಗಳನ್ನು ರಚಿಸಿ ಹಾಡಿ ಅಜರಾಮರರಾಗಿದ್ದಾರೆ. ಅವರು ಶ್ರೇಷ್ಠ ವಾಗ್ಗೇಯಕಾರರು, ಗಾಯಕರು, ಭಗವದ್ಭಕ್ತರು ಮತ್ತು ಸುಧಾರಕರು.

ಇವರಲ್ಲಿ ಶ್ಯಾಮಾಶಾಸ್ತ್ರಿಗಳು ಕರ್ನೂಲ್ ಜಿಲ್ಲೆಯವರು, ಕಂಚೀಪುರದಲ್ಲಿ ನೆಲಸಿದರು. ತಂದೆ ವಿಶ್ವನಾಥಶಾಸ್ತ್ರಿ. ಇವರ ನಾಮಕರಣದ ಹೆಸರು ವೆಂಕಟ ಸುಬ್ರಹ್ಮಣ್ಯ. ಮಮತೆಯಿಂದ ಶ್ಯಾಮಕೃಷ್ಣ. ಜನನ ೧೭೬೨ ರಲ್ಲಿ. ಸಂಗೀತಸ್ವಾಮಿ ಮತ್ತು ಆದಿಅಪ್ಪಯ್ಯನವರ ಶಿಷ್ಯರು. ಕಾಮಾಕ್ಷಿಯ ಪರಮಭಕ್ತರು ಕಾಮಾಕ್ಷಿಯ ಆರಾಧಕರೂ ಹೌದು. ಪೂಜೆಯ ಕಾಲದಲ್ಲಿ ಮನಃಪೂರ್ವಕವಾಗಿ ಹಾಡುತ್ತಿದ್ದರು. ಮುತ್ತುಸ್ವಾಮಿ ದೀಕ್ಷಿತರಿಗೆ ಶ್ರೀವಿದ್ಯೆಯನ್ನು ಉಪದೇಶಮಾಡಿದರೆಂದು ಪ್ರತೀತಿ ಇವರು ಸುಮಾರು ೩೦೦ ಕೃತಿಗಳನ್ನು ರಚಿಸಿದರು. ಇವು ತಾಳಲಯಕ್ಕೆ ಪ್ರಸಿದ್ಧವಾದವು, ವಿದ್ವತ್ಪೂರ್ಣವಾದುವು, ಶೈಲಿಯು ನೂತನವಾಗಿದ್ದರೂ ತ್ಯಾಗರಾಜರಷ್ಟು ಸರಳವಾಗಿಲ್ಲ. ಶ್ಯಾಮಕೃಷ್ಣ ಎಂಬ ಅಂಕಿತದಿಂದ ಕೂಡಿವೆ. ಕೆಲವು ಸ್ವರಜತಿಗಳನ್ನೂ, ವರ್ಣಗಳನ್ನೂ ರಚಿಸಿದ್ದಾರೆ. ಇವರ 'ಓ ಜಗದಂಬಾ' ಎಂಬ ಕೃತಿಗೆ ಇವರ ಶಿಷ್ಯರಾದ ಸಂಗೀತಸ್ವಾಮಿಗಳೂ 'ಪಾಲಿಂಚುಕಾಮಾಕ್ಷಿ' ಮೊದಲಾದವಕ್ಕೆ ಇವರ ಮೊಮ್ಮಕ್ಕಳಾದ ಅಣ್ಣಾಸ್ವಾಮಿ ಶಾಸ್ತ್ರಿಗಳೂ ಸ್ವರಸಾಹಿತ್ಯವನ್ನು ಸೇರಿಸಿದ್ದಾರೆ 'ನವರತ್ನಮಾಲಿಕಾ', 'ನಿನ್ನೇ ನಮ್ಮಿನಾನು'. 'ಓ ಜಗದಂಬಾ', 'ಹಿಮಾದ್ರಿಸುತೇ' ಮುಂತಾದ ಕೃತಿಗಳೂ, 'ಕಾಮಾಕ್ಷಿ ನೀ,' 'ಕಾಮಾಕ್ಷಿ ಅನುದಿನಮೂ' ಎಂಬ ಸ್ವರಜತಿಗಳೂ ಪ್ರಸಿದ್ಧವಾದವು. ಇವರ ಮಕ್ಕಳಾದ ಸುಬ್ಬರಾಯ ಶಾಸ್ತ್ರಿ, ಅನಿಸೂರ್ ಕೃಷ್ಣಯ್ಯರ್, ಸಂಗೀತಸ್ವಾಮಿ ಮೊದಲಾದವರು ಅವರ ಪಟ್ಟಶಿಷ್ಯರು.

ತ್ರಿಮೂರ್ತಿಗಳಲ್ಲಿ ಎರಡನೆಯವರು ತ್ಯಾಗರಾಜರು. ತಂಜಾವೂರು ಜಿಲ್ಲೆಯಲ್ಲಿ ಕಾವೇರಿ ನದಿಯ ದಲ್ಲಿರುವ ತಿರುವೈಯಾರ್ ಅವರ ಜನ್ಮಸ್ಥಳ. ಪಂಡಿತರೂ, ವಿದ್ವಾಂಸರೂ ಆದ ರಾಮಬ್ರಹ್ಮರು ಇವರ ತಂದೆಯವರು. ತಾಯಿ ಸೀತಮ್ಮ, ಬಾಲ್ಯದಲ್ಲಿಯೇ ಸಂಗೀತದಲ್ಲಿ ಆಸಕ್ತರಾಗಿದ್ದು ಸಂಸ್ಕೃತ, ತೆಲುಗು, ವೇದ, ಜ್ಯೋತಿಷ್ಯ ಮೊದಲಾದವುಗಳಲ್ಲಿ ಪಾಂಡಿತ್ಯ ಪಡೆದರು. ಶೊಂಠಿ ವೆಂಕಟರಮಣಯ್ಯನವರು ಸಂಗೀತ ಗುರುಗಳು. ಬಾಲ್ಯದಿಂದಲೂ ರಾಮಭಕ್ತರಾಗಿದ್ದು ೯೬ ಕೋಟಿ ರಾಮನಾಮ ಜಪಮಾಡಿ ರಾಮಚಂದ್ರನ ಸಾಕ್ಷಾತ್ಕಾರವನ್ನು ಪಡೆದರು. ನಾರದರು ಸ್ವರಾರ್ಣವ ಗ್ರಂಥವೊಂದನ್ನು ಕೊಟ್ಟು ರಾಮತಾರಕ ಮಂತ್ರವನ್ನು ಉಪದೇಶಿಸಿದರೆಂದು ಪ್ರತೀತಿ.

ಕೃತಿಗಳು, ದಿವ್ಯನಾಮ ಸಂಕೀರ್ತನೆಗಳು ಪ್ರಹ್ಲಾದ ಭಕ್ತ ವಿಜಯ ಮತ್ತು ನೌಕಾ ಚರಿತ ವೆಂಬ ಗೇಯನಾಟಕ ಇವರ ರಚನೆಗಳು. ಪುರಂದರ ದಾಸರು ವ್ಯವಸ್ಥೆಗೊಳಿಸಿದ ಕರ್ನಾಟಕ ಸಂಗೀತವು ಅತ್ಯುಚ್ಛ್ರಾಯಸ್ಥಿತಿಗೆ ಬರುವುದಕ್ಕೆ ಕಾರಣರಾದವರಲ್ಲಿ ಇವರು ಪ್ರಮುಖರಾದವರು. ತ್ಯಾಗರಾಜರ ಕೃತಿಗಳೆಲ್ಲಾ ಬಹುಕಾವ್ಯಮಯವಾಗಿರುತ್ತವೆ. ಸ್ಪಷ್ಟ ಚಿತ್ರಗಳನ್ನು ಕೊಡತಕ್ಕವಾಗಿವೆ. ಅಧ್ಯಾತ್ಮಿಕವಾದುವು. ಮತ, ಧರ್ಮ, ಕಲೆ, ಜೀವನ ಮುಂತಾದವುಗಳಿಗೆ ಸಂಬಂಧಪಟ್ಟ ಯಾವುದೇ ವಿಷಯವಾಗಲಿ ಅದಕ್ಕೆ ಇವರ ಕೃತಿಗಳಲ್ಲಿ ಉತ್ತರ ಸಿಕ್ಕುವುದು ರಾಗರೂಪಗಳಾದ ಇವರ ಕೃತಿಗಳು ಅತ್ಯಂತ ಮಹತ್ತರವಾದುವು. ಪ್ರತಿಭಾವಂತವೂ ರಮಣೀಯವೂ ಆಗಿವೆ. ಹಲವಾರು ಕೃತಿಗಳು ಒಂದೇ ರಾಗದಲ್ಲಿ ರಚಿತವಾಗಿವೆ. ಆದರೂ ಅವು ಅವುಗಳ ವಿವಿಧ ಮುಖಗಳನ್ನು ಪ್ರದರ್ಶಿಸುವುವು ಅವರಿಗೆ ಪ್ರತಿಯೊಂದು ರಾಗವೂ ಒಂದು ಸಾಗರದಂತೆ. ಪ್ರತಿಯೊಂದು ಕೃತಿಯೂ ಒಂದು ಅಲೆಯಂತೆ. ನೂತನವಾದ ಸ್ವರಸಂಯೋಗಗಳಲ್ಲಿ ಇವರು ಅದ್ವಿತೀಯರು. ಬಹುದಾರಿ, ಪ್ರತಾಪವರಾಳಿ, ಸುಪೋಷಿಣಿ, ಚಂದ್ರಜ್ಯೋತಿ, ವಿಜಯಶ್ರೀ ಮುಂತಾದ ರಾಗಗಳ ಇವರ ಕೃತಿಗಳು ಇವರ ಅದ್ಭುತ ಕಲ್ಪನಾಶಕ್ತಿಯ ನಿದರ್ಶನಗಳು.

ಕೃತಿಗಳಲ್ಲಿ ಸಂಗತಿಗಳನ್ನು ಸೇರಿಸಿರುವುದು ಇವರ ಕ್ರಾಂತ ಸುಧಾರಣೆ. ಇದರಿಂದ ಸಂಗೀತವು ವಿಶೇಷ ಮೋಹಕವಾಯಿತು. ಸಂಗೀತಗಾರನು ನೆರವಲ್ ಮಾಡಿ ತನ್ನ ಪಾಂಡಿತ್ಯ ಪ್ರದರ್ಶನ ಮಾಡಲು ಅವಕಾಶವಾಯಿತು. ಅವರಿಂದ ಸಂಗೀತವು ಹೆಚ್ಚು ಮನರಂಜಕವಾಯಿತು. ಇವರ ಕೃತಿಗಳ ಭಾವದ ವೈವಿಧ್ಯತೆಯನ್ನು ಸಂಗತಿಯ ವೈವಿಧ್ಯದಿಂದ ಪ್ರದರ್ಶನ ಮಾಡುವುವು. ಮಾತುಧಾತುಗಳ ಮೇಳನ ಅನನ್ಯಾದೃಶವಾಗಿವೆ ತಾತ್ತ್ವಿಕಭಾವನೆಗಳ ಪರಾಕಾಷ್ಠತೆಯನ್ನು ಅಲ್ಲಿ ಕಾಣಬಹುದು. ಅವರ 'ಪಂಚರತ್ನ ಕೃತಿಗಳು', 'ಸಮುದಾಯಕೃತಿಗಳು', 'ಕೀರ್ತನಶತಕ', 'ಶತರಾಗ ರತ್ನ ಮಾಲಿಕಾ' ಮೊದಲಾದುವು ಅದ್ಭುತವಾಗಿವೆ. ತಾಳ ಗತಿಯಲ್ಲಿಯೂ ಇವರ ಸಾಧನೆ ಅಪ್ರತಿಮ.

ಇವರ ಶಿಷ್ಯ ಪರಂಪರೆ ಅಪಾರವಾದುದು. ಅವರಲ್ಲಿ ಅನೇಕರು ಅವರಷ್ಟೇ ಮೇಲ್ಮಟ್ಟದ ಸಂಗೀತಕಾರರು ಮತ್ತು ವಾಗ್ಗೇಯಕಾರರು. ವೀಣಾ ಕುಪ್ಪಯ್ಯರ್, ಸುಬ್ಬರಾಯಶಾಸ್ತ್ರಿ, ಮಾನಂಬುಚಾವಡಿ ವೆಂಕಟಸುಬ್ಬಯ್ಯರ್ ವಾಲಾಜಪೇಟೆ ಕೃಷ್ಣಸ್ವಾಮಿಭಾಗವತರ್,

ಮತ್ತು ಸುಂದರ ಭಾಗವತರು ಗೋವಿಂದ ಶಿರ್ವ ಮತ್ತು ಸಭಾಪತಿ ಶಿವನ್, ತಿಲ್ಲಸ್ಥಾನಂ ರಾಮಸ್ವಾಮಯ್ಯಂಗಾರ್ ಮೊದಲಾದ ಒಂದು ದೊಡ್ಡ ಶಿಷ್ಯಪರಂಪರೆ ಅವರ ಕೃತಿಗಳನ್ನು ಸರ್ವಾದರಣೀಯವನ್ನಾಗಿ ಮಾಡಿದೆ.

ಸಂಗೀತದ ತ್ರಿಮೂರ್ತಿಗಳಲ್ಲಿ ಮುತ್ತುಸ್ವಾಮಿದೀಕ್ಷಿತರು ಮೂರನೆಯವರು. ಇವರು ರಾಮಸ್ವಾಮಿದೀಕ್ಷಿತರ ಮಗ. ರಾಮಸ್ವಾಮಿ ದೀಕ್ಷಿತರು ೧೮ ನೆಯ ಶತಮಾನದ ಪ್ರಸಿದ್ಧ ಸಂಗೀತ ವಿದ್ವಾಂಸರು. ತಿರುವಡಮರದೂರ್ ಮತ್ತು ತಿರುವಾರೂರಿನಲ್ಲಿ ಇದ್ದು, ಉತ್ತಮ ಕೃತಿಗಳನ್ನು ರಚಿಸಿದರು. ಹಂಸಧ್ವನಿರಾಗವನ್ನು ಸೃಷ್ಟಿಸಿದವರೇ ಇವರು. ವೆಂಕಟಕೃಷ್ಣ ಎಂಬ ಅಂಕಿತದಲ್ಲಿ ಹಲವು ರಾಗ ಮಾಲಿಕೆಗಳು, ವರ್ಣಗಳು ಮತ್ತು ಕೃತಿಗಳನ್ನು ರಚಿಸಿದ್ದಾರೆ. ಹಂಸಧ್ವನಿ ರಾಗವನ್ನು ಕುರಿತು ಒಂದು ಪ್ರಬಂಧವನ್ನು ರಚಿಸಿ ಅದೇ ರಾಗದಲ್ಲಿ ಹಲವು ತೆಲುಗುಪದಗಳನ್ನು ರಚಿಸಿದ್ದಾರೆ ವೇಗವಾಹಿನಿ, ಮನೋಹರಿ ಮತ್ತು ಪೂರ್ಣಚಂದ್ರಿಕಾ ರಾಗಗಳನ್ನು ಅಸಾಧಾರಣ ಪ್ರತಿಭೆಯಿಂದ ಉಪಯೋಗಿಸಿಕೊಂಡಿದ್ದಾರೆ ಇವರು ರಚಿಸಿರುವ ಚೌಕ ಮತ್ತು ತಾನವರ್ಣಗಳು ವಿಶೇಷವಾದ ಗಮಕಗಳಿಂದ ಕೂಡಿ ವೈಣಿಕರಿಗೆ ಬಹಳ ಉಪಯುಕ್ತವಾಗಿವೆ. ಮುತ್ತುಸ್ವಾಮಿ ದೀಕ್ಷಿತರು ವೆಂಕಟಮುಖಿಯ ಪರಂಪರೆಯವರು. ಕಾಶಿಯಲ್ಲಿ ಚಿದಂಬರನಾಥ ಯೋಗಿಗಳಿಂದ ಸಾಕಷ್ಟು ಹಿಂದೂಸ್ಥಾನಿ ಸಂಗೀತಪದ್ಧತಿಯನ್ನು ಅಭ್ಯಸಿಸಿದರು. ಅದರ ಪ್ರಭಾವವು ಅವರ ಅನೇಕ ಕೃತಿಗಳಲ್ಲಿ ಕಾಣುತ್ತದೆ. ತಿರುತ್ತಣಿಯ ಸುಬ್ರಹ್ಮಣ್ಯಸ್ವಾಮಿ ಇವರ ಆರಾಧ್ಯದೈವ, ಅವನ ಸಾಕ್ಷಾತ್ಕಾರ ಪಡೆದಿದ್ದರು. ಗುರುಗುಹ ಎಂಬ ಅಂಕಿತದಿಂದ ೨೦ ಕೃತಿಗಳನ್ನು ರಚಿಸಿದ್ದಾರೆ. ಕಂಚಿಯ ಕಾಮಾಕ್ಷಿ ಮತ್ತು ವರದರಾಜಸ್ವಾಮಿಯ ವಿಷಯವಾಗಿ ಉತ್ತಮ ಕೃತಿಗಳನ್ನು ರಚಿಸಿದ್ದಾರೆ ತಿರುವೈಯಾರಿನ ತ್ಯಾಗರಾಜೇಶ್ವರ, ಮತ್ತು ಕಂಚಿ ಜಂಬುಕೇಶ್ವರ ಮೊದಲಾದ ಪವಿತ್ರ ಕ್ಷೇತ್ರಗಳ ಅಧಿದೇವತೆಗಳಾದ ಪಂಚಲಿಂಗ ವಿಷಯಗಳ ವಿಷಯವಾಗಿ ವಿವಿಧರಾಗಗಳಲ್ಲಿ ಕೃತಿ ರಚನೆ ಮಾಡಿದ್ದಾರೆ. ಅವರ ಕೃತಿಗಳು ಭಕ್ತಿ ವಿರಕ್ತಿ ಗಾಂಭೀರ್ಯಗಳಿಂದ ಕೂಡಿ ಬಹಳ ಅರ್ಥಗರ್ಭಿತವಾಗಿವೆ. ಅವರು ದ್ರವ್ಯಾಪೇಕ್ಷೆಯಿಂದ ಯಾವ ಮಾನವನನ್ನೂ ಆಶ್ರಯಿಸಲಿಲ್ಲ. ಕೃತಿಗಳೆಲ್ಲವೂ ಭಾವಗರ್ಭಿತವೂ ಅನ್ವರ್ಥವೂ ಆಗಿವೆ. ಆದರೂ ಅಪೂರ್ವವಾದ ಶಬ್ದಾಲಂಕಾರಗಳಿಂದ ಕೂಡಿವೆ. ಅವರ ಸಂಸ್ಕೃತ ಮತ್ತು ಸಂಗೀತ ಪಾಂಡಿತ್ಯ ಅವರ್ಣನೀಯ ಅದನ್ನು, ಅವರು ತಿರುವಾರೂರು ದೇವಾಲಯದ ೧೬ ಗಣಪತಿಗಳನ್ನು ಕುರಿತ ಕೃತಿಗಳಲ್ಲಿ ಕಾಣಬಹುದು ಅವರ ಕೃತಿಗಳಲ್ಲಿ ರಾಗಮುದ್ರೆ, ವಾಗ್ಗೇಯಕಾರನ ಮುದ್ರೆ, ಪ್ರಬಂಧಮುದ್ರೆ, ಮತ್ತು ರಾಜಮುದ್ರೆಗಳನ್ನು ಕಾಣಬಹುದು. ಅದರ ವಿಷಯಕವಾಗಿ ಅನೇಕ ಪವಾಡಗಳು ಉಕ್ತವಾಗಿವೆ. ಅವು ಅವರ ಸಂಗೀತ ಮತ್ತು ಸಾಹಿತ್ಯ ಶಕ್ತಿಯ ದ್ಯೋತಕಗಳು. ಅವರು ೧೭೭೬ ರಲ್ಲಿ ಅವತರಿಸಿ ೧೮೩೫ ರಲ್ಲಿ ನಾದಬ್ರಹ್ಮನಲ್ಲಿ ಐಕ್ಯವಾದರು.

★

## ಸಪ್ತಗಿರಿ ಯನ್ನು ಬೆಳೆಸಿರಿ

ಸನಾತನ ಧರ್ಮವನ್ನು ಹರಡಲು ಪರಿಶ್ರಮಿಸುತ್ತಿರುವ ಸಪ್ತಗಿರಿ ಮಾಸ ಪತ್ರಿಕೆ ಓದುಗರ ಸಂಪೂರ್ಣ ಸಹಕಾರದ ಅಗತ್ಯ ಹೊಂದಿದೆ. ನೀವು ಈ ಪತ್ರಿಕೆಯನ್ನು ನಿಮ್ಮ ಬಂಧುಗಳಿಗೆ, ಮಿತ್ರರಿಗೆ ನಿಮ್ಮ ಕಾಣಿಕೆಯಾಗಿ ನೀಡಬಹುದು. ಒಂದು ವರ್ಷದ ಚಂದಾ ಹಣವನ್ನು ನಮಗೆ ಕಳುಹಿಸಿ. ನಿಮ್ಮ ಪರವಾಗಿ ನೀವು ಹೆಸರಿಸುವವರಿಗೆ ಒಂದು ವರ್ಷ ಸಪ್ತಗಿರಿಯನ್ನು ಕಳುಹಿಸಲಾಗುತ್ತದೆ. ಕೆಳಗಣ ಕೂಪನ್ ಅನ್ನು ತುಂಬಿ ಹನ್ನೆರಡು ರೂಗಳ ಎಂ. ಓ., ಡಿ. ಡಿ. ಅನ್ನು ಕಳುಹಿಸಿರಿ.

ಮಾನ್ಯರೆ :

ಸಪ್ತಗಿರಿಯನ್ನು ಒಂದು ವರ್ಷ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿರಿ.
............ರೂಗಳ ಎಂ. ಓ/ ಡಿ. ಡಿ. ಕಳುಹಿಸಿದ್ದೇನೆ.

ಸಹಿ.

( ಬಿಡಿಬಿಡಿಯಾದ ಸ್ಪಷ್ಟ ಅಕ್ಷರದಲ್ಲಿ ಬರೆಯಿರಿ )

ಹೆಸರು ............................................ ..

ವಿಳಾಸ ............ .................................

**ಸಂಪಾದಕರು**
ಸಪ್ತಗಿರಿ
ತಿ. ತಿ. ದೇ. ತಿರುಪತಿ.–ಇವರಿಗೆ.

## ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ಶಕ್ತಿದೇವತೆಯ ವಿವಿಧ ಮುಖಗಳು

ಮಾನವನು, ಬಹುಮುಖವಾದ ತನ್ನ ಸುಖ-ಸಂತೋಷಗಳನ್ನು ಹೆಚ್ಚಿಸಿಕೊಳ್ಳಲು, ಆಸೆ-ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು ಹಾಗೂ ಮುಖ್ಯವಾಗಿ ಮಾನಸಿಕ ನೆಮ್ಮದಿಯನ್ನು ಪಡೆಯಲು ದೇವತಾರಾಧನೆ ಒಂದು ಸಾಧನೆಯಾಗಿದೆ. ಲೌಕಿಕ ಮತ್ತು ಪಾರಮಾರ್ಥಿಕ ಸಿದ್ಧಿಯನ್ನು ಪಡೆಯುವುದು ದೇವತಾರಾಧನೆಯ ಗುರಿ ಎನ್ನಬಹುದು. ಮನುಷ್ಯನ ಸಂಸ್ಕಾರ ಹಾಗೂ ಅವನ ನೈತಿಕ ಮತ್ತು ಬೌದ್ಧಿಕ ಮಟ್ಟಕ್ಕೆ ತಕ್ಕಂತೆ ಮತ್ತು ಅವನು ಸೇರಿದ ಹಾಗೂ ನಂಬಿದ ಮತ-ಧರ್ಮಕ್ಕೆ ಅನುಸಾರವಾಗಿ ಅವನ ಆರಾಧನೆಯ ವಿಧಿ-ವಿಧಾನಗಳು ವ್ಯತ್ಯಾಸವಾಗುತ್ತಾ ಹೋಗುತ್ತವೆ. ದೇವತಾ ಪ್ರಾರ್ಥನೆ ಮಾಡುವುದು ಮುಖ್ಯವೇ ಹೊರತು ಹೇಗೆ ಮಾಡಬೇಕೆನ್ನುವುದು ಮುಖ್ಯವಲ್ಲ.

ಹೆಣ್ಣು ಮತ್ತು ಗಂಡು ವಂಶಾಭಿವೃದ್ಧಿಗೆ ಕಾರಣರಾದಂತೆ, ಪ್ರಕೃತಿ ಮತ್ತು ಪುರುಷರು ಈ ಜಗತ್ತಿನ ಸೃಷ್ಟಿಗೆ ಮೂಲ ಕಾರಣರು. ಪುರುಷನಿಂದ ಪ್ರಕೃತಿ ಉದಯಿಸಿ ಇವರಿಬ್ಬರಿಂದ ಈ ಜಗತ್ತು ಸೃಷ್ಟಿಯಾಯಿತೆಂದು ವೇದ-ಪುರಾಣಗಳು ಪ್ರಕೃತಿ ಪುರುಷರನ್ನು ಕುರಿತಂತೆ ಹಲವಾರು ಕಡೆಗಳಲ್ಲಿ ಉಲ್ಲೇಖಿಸುತ್ತವೆ ಕೆಳಕಂಡ ಮೂರು ಮುಖ್ಯ ಅಂಶಗಳಿಂದ ಇದನ್ನು ಸ್ಪಷ್ಟಪಡಿಸಬಹುದು :

(1) 'ಪ್ರ' ಎಂದರೆ ಮೂಲವಸ್ತು (ಧಾತು). 'ಕೃತಿ' ಎಂದರೆ ಸೃಷ್ಟಿ: 'ಪ್ರಕೃತಿ' ಎಂದರೆ ಸೃಷ್ಟಿಗೆ ಕಾರಣವಾದ ಮೂಲವಸ್ತು ಎಂದಾಗುತ್ತದೆ.

(2) 'ಪ್ರ' ಎಂದರೆ ಸಾತ್ತ್ವಿಕ, 'ಕೃ' ಎಂದರೆ ರಾಜಸಿಕ, 'ತಿ' ಎಂದರೆ ತಾಮಸಿಕ. ಹೀಗೆ ಪ್ರಕೃತಿಯು ಮೂರು ಗುಣಗಳನ್ನೂ ಸೂಚಿಸುತ್ತದೆ.

(3) 'ಪ್ರ' ಎಂದರೆ ಮೊದಲು, 'ಕೃತಿ' ಎಂದರೆ ಸೃಷ್ಟಿ. ಅಂದರೆ, ಈ ಸೃಷ್ಟಿಗೆ ಮೊದಲು ಇದ್ದದ್ದು ಎಂದೂ ಅರ್ಥವಾಗುತ್ತದೆ ಈ ರೀತಿ ಪ್ರಕೃತಿಯನ್ನು ಮೂರು ಬಗೆಯಲ್ಲಿ ಅರ್ಥೈಸಬಹುದು. ಸೃಷ್ಟಿಗೆ ಮುಂಚೆ ಪರಬ್ರಹ್ಮ ಅಥವಾ ಪರಮಾತ್ಮನಲ್ಲಿ ಒಂದಾಗಿದ್ದ ಪ್ರಕೃತಿ-ಪುರುಷರು ಸೃಷ್ಟಿಯ ಇಚ್ಛೆಯಿಂದ ಬೇರೆ ಬೇರೆಯಾದರು. ಒಂದೇ ಮೂಲದಿಂದ ಹೀಗೆ ಬೇರೆ ಬೇರೆಯಾದಾಗ, ಎಡಭಾಗವು 'ಪ್ರಕೃತಿ' ಎಂದೂ, ಬಲಭಾಗವು 'ಪುರುಷ' ಎಂದೂ ರೂಪುಗೊಂಡವು. ಈ ಮೂಲ ಪ್ರಕೃತಿಯೇ ಬೇರೆ ಬೇರೆ ರೂಪದ ಐದು ದೇವತೆಗಳಾಗಿ ಅವತರಿಸಿದಳು. ಅವರೆಂದರೆ, ದುರ್ಗಾ, ಲಕ್ಷ್ಮಿ, ಸರಸ್ವತಿ, ಸಾವಿತ್ರಿ, ಮತ್ತು ರಾಧಾ. ಇವರನ್ನು ಪಂಚ ದೇವಿಗಳೆಂದೂ ಕರೆಯುತ್ತಾರೆ. (ದೇವೀ ಭಾಗವತ: ಸ್ಕಂಧ-9)

ದುಷ್ಟ ಶಿಕ್ಷಣ-ಶಿಷ್ಟ ರಕ್ಷಣೆಯ ಕಾರ್ಯದಲ್ಲಿ ಪುರುಷ ದೇವತೆಗಳಿಗಿರುವ ಸ್ಥಾನವೇ ಸ್ತ್ರೀ ದೇವತೆಗಳಿಗೂ ಇರುವುದೆಂಬ ಅಂಶವು ದೇವೀ ಮಹಾತ್ಮೆಯ ಮೂಲಕ ಖಚಿತವಾಗುತ್ತದೆ. ಏಕೆಂದರೆ ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು,"ಧರ್ಮಗ್ಲಾನಿಯಾದಾಗಲೆಲ್ಲಾ ನಾನು ಅವತರಿಸಿ ಧರ್ಮ ಸಂಸ್ಥಾಪನೆ ಮಾಡುತ್ತೇನೆ"- ಎಂದು ಆಶ್ವಾಸನೆ ಕೊಟ್ಟ ಹಾಗೆ ದುರ್ಗಾಮಾತೆಯೂ ಮತ್ತೆ ಮತ್ತೆ ಅವತರಿಸಿ ಜಗತ್ತಿನ ಪಾಲನೆ ಮಾಡುತ್ತೇನೆಂದು ತನ್ನ ಭಕ್ತರಿಗೆ ಆಶ್ವಾಸನೆ ನೀಡುತ್ತಾಳೆ.

ಇತ್ಥಂ ಯದಾ ಯದಾ ಬಾಧಾ
ದಾನವೋತ್ಥಾ ಭವಿಷ್ಯತಿ।



ತದಾ ತದಾವತೀರ್ಯಾಹಂ
ಕರಿಷ್ಯಾಮ್ಯರಿಸಂಕ್ಷಯಮ್ ॥
(ದುರ್ಗಾಸಪ್ತಶತಿ 11-55)

ದೇವಿಯು ತನ್ನ ಭಕ್ತರಿಗೆ ನೀಡಿದ ಈ ಆಶ್ವಾಸನೆಯಿಂದ ಪುರಾಣ ಯುಗದಲ್ಲಿ ಸ್ತ್ರೀ ದೇವತೆಗಳಿಗಿದ್ದ ಸ್ಥಾನ-ಮಾನದ ಅರಿವಾಗುತ್ತದೆ. ದುಷ್ಟರನ್ನು ಶಿಕ್ಷಿಸುವ ಮತ್ತು ಆರ್ತರನ್ನು ರಕ್ಷಿಸುವ ಹೊಣೆಯನ್ನು ಸ್ತ್ರೀ ದೇವತೆಗಳು ಸ್ವತಂತ್ರವಾಗಿಯೂ ಹೊರುತ್ತಿದ್ದರೆಂಬುದನ್ನು ಶಕ್ತಿ ಪಂಥಕ್ಕೆ ಸೇರಿದ ಆಧಾರ ಗ್ರಂಥಗಳು ದೃಢಪಡಿಸುತ್ತವೆ. ಶಾಕ್ತಾಗಮವು ಭಗವಂತನನ್ನು 'ದೇವಿ' ಎಂದು ಕರೆದು ಜಗನ್ಮಾತೆಯಾದ ದೇವಿಯನ್ನೇ

ಡಾ|| ಎನ್. ವಿ. ವಿಮಲ

ಪರಮ ಶ್ರೇಷ್ಠ ಎಂದು ಹೇಳಿ ದೇವಿಯ ಪರತತ್ತ್ವದ ಕುರಿತಾದ ವಿವರಗಳನ್ನು ನೀಡುತ್ತದೆ. ಈ ಶಕ್ತಿ ಮತವನ್ನು ಶಾಕ್ತಮತ, ತಾಂತ್ರಿಕ ಮತ, ತಂತ್ರ, ದೇವೀ ಪಂಥ-ಎಂಬ ಹೆಸರುಗಳಿಂದ ಕರೆಯುತ್ತಾರೆ. ತಾಂತ್ರಿಕ ಮತವೆಂದರೆ ತತ್ತ್ವ ಮತ್ತು ಮಂತ್ರಗಳಿಂದಕೂಡಿದ ಮತವೆಂದು ಅರ್ಥವಾಗುತ್ತದೆ. ಒಟ್ಟನಲ್ಲಿ ಶಾಕ್ತ ಶಾಸ್ತ್ರದಲ್ಲಿ ದೇವೀಮಹಾತ್ಮೆಗೆ ಅತ್ಯಂತ ಪ್ರಾಶಸ್ತ್ಯ ದೊರಕಿದೆ. ಶಕ್ತಿ ಮಹಾತ್ಮೆಯನ್ನು ಸಾರುವ ಪವಿತ್ರವಾದ ಆಧಾರ ಗ್ರಂಥಗಳು . ದೇವೀ ಭಾಗವತ ಪುರಾಣ, ದುರ್ಗಾ ಸಪ್ತಶತಿ, ಶ್ರೀ ಲಲಿತೋಪಾಖ್ಯಾನ, ಕಾಳಿಕಾ ಪುರಾಣ ಮತ್ತು ಬಂಗಾಳದಲ್ಲಿ ಪ್ರಸಿದ್ಧವಾದ ಶ್ರೀ ಶ್ರೀ ಚಂಡಿ-ಇವು ಶಾಕ್ತರಿಗೆ ಭಗವದ್ಗೀತೆಯಂತೆ ಪರಮ ಪೂಜ್ಯವಾದ ಗ್ರಂಥಗಳಾಗಿವೆ. ಶೃಂಗೇರಿಯ ಶಾರದಾ ಪೀಠ, ಕಂಚಿಯ ಶ್ರೀ ಕಾಮೇಶ್ವರಿ ಪೀಠಗಳು ಶಾಕ್ತರ ಗುರು ಪೀಠಗಳೆಂದು ಪ್ರಸಿದ್ಧವಾಗಿವೆ.

ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ, ಬಂಗಾಳದಿಂದ ಮಹಾರಾಷ್ಟ್ರದವರೆಗೆ ಭಾರತದ ಉದ್ದ-ಅಗಲಗಳನ್ನು ವ್ಯಾಪಿಸಿ ನಿಂತಿರುವ ನೂರಾಎಂಟು ದೇವೀ ಪೀಠಗಳು ಶಕ್ತಿ ದೇವತೆಯ ಭವ್ಯತೆಯನ್ನೂ, ಆರಾಧನೆಯ ಮಹತ್ವವನ್ನೂ ಅನಾದಿ ಕಾಲದಿಂದಲೂ ಸಾರುತ್ತಿವೆ ಹೀಗೆ ಶಕ್ತಿ ದೇವತೆಯು ಭಾರತದ ನಾಲ್ಕು ದಿಕ್ಕುಗಳಲ್ಲಿಯೂ ಅಧಿದೇವತೆಯಾಗಿ ನಿಂತು ಭಾರತದ ರಕ್ಷಣೆಯ ಭಾರವನ್ನು ಹೊತ್ತಿರುವಳೋ ಎನ್ನುವ ರೀತಿಯಲ್ಲಿ ವಿರಾಜಿಸುತ್ತಿದ್ದಾಳೆ. ಭಾರತದಲ್ಲಿ ಶಕ್ತಿ ಪೂಜೆಯು ಸುಮಾರು 4,000 ವರ್ಷಗಳಷ್ಟು ಹಿಂದಿನ ಪ್ರಾಚೀನತೆಯನ್ನು ಪಡೆದಿದೆ ಎನ್ನುವ ಪ್ರತೀತಿ ಇದೆ.

ಶಿವನ ಅರ್ಧಾಂಗಿಯಾದ ಶಿವೆಯು ತನ್ನ ಭಕ್ತರ ಪ್ರಕಾರ 64 ಸ್ವರೂಪಗಳಲ್ಲಿ ಕಾಣಿಸಿಕೊಳ್ಳುತ್ತಾಳೆ ಮತ್ತು ನಾನಾ ಹೆಸರುಗಳಿಂದ ಪೂಜಿಸಲ್ಪಡುತ್ತಾಳೆ. ಶಿವೆಯು ಶಕ್ತಿ ಸ್ವರೂಪಳೂ ಅಹುದು. ಆದಿಪರಾಶಕ್ತಿಯೂ ಅಹುದು. 'ಶ' ಎಂದರೆ ಸುಖ-ಸಂಪತ್ತು, 'ಕ್ತಿ' ಎಂದರೆ ಶಕ್ತಿ. ಅಂದರೆ, ಸಂಪತ್ತು ಮತ್ತು ಶೌರ್ಯಗಳನ್ನು ಒಳಗೊಂಡಿರುವ ಸಾಕಾರ ಸ್ವರೂಪವೇ ಈ ಶಕ್ತಿ ದೇವತೆ. ಅಥವಾ ಸುಖ-ಸಂಪತ್ತು ಹಾಗೂ ಶಕ್ತಿಯನ್ನು ನೀಡುವವಳು ಎಂದೂ ಅರ್ಥವಾಗುತ್ತದೆ. ಭಗವತಿ, ಪಾರ್ವತಿ, ಭದ್ರಕಾಳಿ, ಕ್ಷೇಮ ಕ್ಷೇಮಂಕರಿ, ಅಂಬಿಕಾ, ದೇವಿ-ಇವೆಲ್ಲಾ

ಶಿವನ ಅರ್ಧಾಂಗಿಯಾದ ಶಿವೆಯು ಅಥವಾ ಶಕ್ತಿಯು ನಾನಾ ಹೆಸರುಗಳು. ಇದಕ್ಕೆ ಮೊದಲು ಎಲ್ಲಾ ದೇವತೆಗಳಲ್ಲಿಯೂ ಶಕ್ತಿಯ ಅಂಶವು ಅಂತರ್ಗತವಾಗಿತ್ತು. ದೇವಾಸುರರ ಯುದ್ಧದ ಸಮಯದಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳು ಚಂಡಿಗೆ ಸಹಾಯ ಮಾಡಲು ತೊಡಗಿದರು. ಆಗ ತಮ್ಮಲ್ಲಿದ್ದ ಶಕ್ತಿಯ ಅಂಶಗಳನ್ನೂ, ವಾಹನಾದಿಗಳನ್ನೂ, ಆಯುಧ ವಿಶೇಷಗಳನ್ನೂ, ಭೂಷಣಾದಿಗಳನ್ನೂ ದೇವಿಗೆ ಕೊಟ್ಟರು. ದೇವತೆಗಳ ಅಂಶದಿಂದ ಜನಿಸಿದ ಶಕ್ತಿ ಮಾತೃಕೆಗಳಾದ, ಬ್ರಹ್ಮಾಣಿ, ವೈಷ್ಣವಿ, ಶಂಕರಿ, ಕೌಮಾರಿ, ವರಾಹಿ, ನಾರಸಿಂಹಿ, ಯಾಮ್ಯಾ, ಕೌಬೇರಿ–ಇವರುಗಳು ತಮ್ಮ ತಮ್ಮ ವಾಹನಗಳಿಂದ, ಶಸ್ತ್ರಾಯುಧಗಳಿಂದ ಯುದ್ಧಕ್ಕೆ ಹೊರಟು ದೇವಿಗೆ ಸಹಾಯಕರಾಗಿ ನಿಂತರು. ಈ ಒಂದು ನಯನ ಮನೋಹರ ದೃಶ್ಯದಿಂದ ಸಂತೋಷಗೊಂಡ ಸಮಸ್ತ ದೇವತೆಗಳೂ ಚಂಡಿಯನ್ನು ಹರಸಿ ಅವಳಿಗೆ ವಿಜಯ ಕೋರಿದರು. ಚಂಡ-ಮುಂಡರನ್ನು ಸಂಹರಿಸಿದ್ದರಿಂದ ದೇವಿಗೆ ಚಾಮುಂಡಿಯೆಂದೂ; ಮಹಿಷಾ–ಸುರನನ್ನು ಸಂಹರಿಸಿದ್ದರಿಂದ ದೇವಿಗೆ ಮಹಿಷಮರ್ಧಿನಿಯೆಂದೂ ಹೆಸರಾಯಿತು.

ದುಷ್ಟರನ್ನು ಸಂಹರಿಸಲು ರೌದ್ರಾವತಾರ ತಾಳಿದಾಗ ಪಾರ್ವತಿಗೆ 'ದುರ್ಗಾ', 'ಕಾಳಿ', 'ಚಾಮುಂಡಿ'– ಎಂಬ ಹೆಸರುಗಳು ಸಾರ್ಥಕ ನಾಮಗಳಾದುವು. ಇದಕ್ಕೆ ಪ್ರತಿಯಾಗಿ ಪಾರ್ವತಿಯು ತನ್ನ ಭಕ್ತರ ಅಭೀಷ್ಟವನ್ನು ಈಡೇರಿಸಲು ಸೌಮ್ಯಳಾಗಿ ಸುಪ್ರಸನ್ನಳಾಗಿರುವಾಗ ಅವಳಿಗೆ ಲಲಿತಾ, ದೇವಿ, ಕನ್ಯಾ, ಕಾಮಾಕ್ಷಿ, ಗೌರಿ, ಮೀನಾಕ್ಷಿ, ಕಾತ್ಯಾಯನಿ, ಉಮಾ, ಮೂಕಾಂಬಿಕಾ, ರಾಜೇಶ್ವರಿ, ವಿಶಾಲಾಕ್ಷಿ–ಎಂಬ ಹೆಸರುಗಳು ಸಾರ್ಥಕ ನಾಮಗಳಾದುವು. ದೇವಿಯು ಆಯಾ ಕಾಲದಲ್ಲಿ ಮಾಡಿದ ಕೆಲಸಕಾರ್ಯಗಳಿಗೆ ಅನುಗುಣವಾಗಿ, ಅವಳ ಸ್ವಭಾವ, ಸ್ವರೂಪ, ಗುಣ–ವಿಶೇಷಣಗಳಿಗೆ ಅನುಗುಣವಾಗಿ ಈ ಹೆಸರುಗಳು ಸೂಚಿತವಾಗುತ್ತವೆ

ವೇದಗಳು ಸ್ತ್ರೀ ದೇವತೆಯ ಶಕ್ತಿ ಸಾಮರ್ಥ್ಯಗಳಿಗೆ ಹೆಚ್ಚಿನ ಪ್ರಾಮುಖ್ಯವನ್ನು ನೀಡಿಲ್ಲವೆಂಬುದು ಸರ್ವವಿದಿತ. ವೇದದಲ್ಲಿ ದುರ್ಗೆಯ ಪ್ರಸ್ತಾಪವಿಲ್ಲ. ಪುರಾಣಗಳಲ್ಲಿ ಮತ್ತು ನಂತರದ ಧಾರ್ಮಿಕ ಗ್ರಂಥಗಳಲ್ಲಿ ಕ್ರಮೇಣ ದೇವಿಯ ಮಹತ್ತ್ವವನ್ನೂ, ಸಾಮರ್ಥ್ಯವನ್ನೂ ವರ್ಣಿಸಿರುವುದನ್ನು ಕಾಣಬಹುದು. ದುರ್ಗಾದೇವಿಯು ಮಹಿಷಾಸುರನನ್ನು ಸಂಹಾರ ಮಾಡಿದ ಪ್ರಕರಣವನ್ನು ಹಲವಾರು ಪುರಾಣಗಳು ವರ್ಣಿಸುತ್ತವೆ. ಉದಾ – ವರಾಹ ಪುರಾಣ (ಅ. 9೦), ಮಾರ್ಕಂಡೇಯ ಪುರಾಣದ ಹದಿಮೂರು ಅಧ್ಯಾಯಗಳು (ಅ 81–94). ಮಾರ್ಕಂಡೇಯ ಪುರಾಣದ ಈ ಹದಿಮೂರು ಅಧ್ಯಾಯಗಳು ದೇವಿಯ ಬಗೆಗಿನ ಸಮಸ್ತ ವಿವರವನ್ನೂ ನೀಡುತ್ತವೆ. ಇದಕ್ಕೆ ದುರ್ಗಾ ಸಪ್ತಶತಿ ಎಂಬ ಎಂಬ ಹೆಸರಿದೆ ಇದರ ಮೊದಲ ಭಾಗವು ದೇವಿಯ 'ಮಹಾಕಾಳಿ' ಸ್ವರೂಪವನ್ನೂ, ಅದಕ್ಕೆ ಸಂಬಂಧಿಸಿದ ವಿವರವನ್ನೂ, ಎರಡನೆಯ ಭಾಗವು 'ಮಹಾಲಕ್ಷ್ಮಿ'ಯ ಸ್ವರೂಪವನ್ನೂ, ಅದಕ್ಕೆ ಸಂಬಂಧಿಸಿದ ವಿವರವನ್ನೂ ಮತ್ತು ಮೂರನೆಯ ಭಾಗವು 'ಸರಸ್ವತಿ'ಯ ಸ್ವರೂಪವನ್ನೂ, ಅದಕ್ಕೆ ಸಂಬಂಧಿಸಿದ ವಿವರವನ್ನೂ ತಿಳಿಸುತ್ತವೆ. ದೇವಿಯ ಈ ಮೂರು ಮುಖ್ಯ ಮುಖಗಳನ್ನು ಈ ದುರ್ಗಾ ಸಪ್ತಶತಿಯು ವಿವರಿಸುವುದರಿಂದ ಇದು ಶಾಕ್ತೇಯರಿಗೆ ಪರಮ ಪವಿತ್ರವಾಗಿದೆ. ಹೆಸರೇ ಸೂಚಿಸುವಂತೆ ಇದರಲ್ಲಿ 700 ಶ್ಲೋಕಗಳಿವೆ. ಮಾರ್ಕಂಡೇಯ ಮುನಿಯು ದೇವಿಯ ಮಹಾತ್ಮೆಯನ್ನು ಕ್ರೌಷ್ಟಿಕಿಗೆ ತಿಳಿಸುತ್ತಾನೆ. ಬ್ರಹ್ಮಾಂಡ ಪುರಾಣದ ಉತ್ತರ ಕಾಂಡದ ಮೂರು ಅಧ್ಯಾಯಗಳಲ್ಲಿ ಲಲಿತಾ ಸಹಸ್ರನಾಮವು ಅಂತರ್ಗತವಾಗಿದೆ. ಲಲಿತಾ ಉಪಾಖ್ಯಾನದ ಮಹಿಮೆಯನ್ನು ಹಯಗ್ರೀವರು ಅಗಸ್ತ್ಯರಿಗೆ ತಿಳಿಸುತ್ತಾರೆ. ದುರ್ಗೆಯು ಶುಂಭ–ನಿಶುಂಭರನ್ನು ವಧಿಸಿದರೆ, ಲಲಿತೆಯು ಭಂಡಾಸುರನನ್ನು ಸಂಹರಿಸುತ್ತಾಳೆ.

ಋಗ್ವೇದದಲ್ಲಿ ಸರಸ್ವತಿಯು ಪವಿತ್ರವಾದ ನದಿಗೆ ಸಂಕೇತವಾಗಿದ್ದಾಳೆ (ಸರಸ್+ವತಿ=ಹರಿಯುವ ನೀರು ) ಋಗ್ವೇದದ ಪ್ರಕಾರ ಪ್ರಥಮತಃ ಸರಸ್ವತಿ ಒಬ್ಬ ನದೀ ದೇವತೆ. ನಂತರದ ಬ್ರಾಹ್ಮಣ ಗ್ರಂಥಗಳಲ್ಲಿ ಸರಸ್ವತಿಯನ್ನು 'ವಾಕ್'ನೊಡನೆ ಸಮೀಕರಿಸುತ್ತಾರೆ. ವೇದೋತ್ತರ ಕಾಲದ ಪುರಾಣ ಕತೆಗಳಲ್ಲಿ ಅವಳನ್ನು ವಾಗ್ಮಿತೆಯ ಮತ್ತು ವಿವೇಕದ ದೇವತೆ (Goddess of eloquence and wisdom) ಯೆಂದು ವರ್ಣಿಸಿದ್ದಾರೆ. ಇದರ ಫಲವಾಗಿ ಅವಳು ವಿದ್ಯಾದಿ ಕಲಾ ದೇವತೆಯೆಂದೂ, ಬ್ರಹ್ಮನ ರಾಣಿಯೆಂದೂ ಮುಂದೆ ಪ್ರಸಿದ್ಧಳಾದಳು. ಇವಳು ದೇವಿಯ ಸಾತ್ತ್ವಿಕ ಮೂರ್ತಿಯಾಗಿ ಕಂಗೊಳಿಸಿದ್ದಾಳೆ. ಯಜುರ್ವೇದದಲ್ಲಿ ಸರಸ್ವತಿಯು ಮೂರು ರೂಪಗಳಲ್ಲಿ ಕಾಣಿಸಿಕೊಳ್ಳುತ್ತಾಳೆ. ನದಿಯ ರೂಪದಲ್ಲಿ–ಇಂದ್ರನಿಗೆ ಉಪಚಾರ ಮಾಡಿದ ಚಿಕಿತ್ಸಕಳಾಗಿ (ಧಾತ್ರಿಯಾಗಿ) ಮತ್ತು – ಯಜ್ಞ – ಯಾಗಾದಿಗಳಿಗೆ ಸಂಬಂಧಪಟ್ಟ ದೇವತೆಗಳ ಸಂಗಾತಿಯಾಗಿ.

ಹಿಂದೂಗಳು ಆಶ್ವಯುಜ ಮಾಸದ ಶುಕ್ಲ ಪಕ್ಷದ ಪಾಡ್ಯಮಿಯಿಂದ ಹಿಡಿದು ದಶಮಿಯವರೆಗೆ ನವರಾತ್ರಿಯನ್ನು ಆಚರಿಸುತ್ತಾರೆ. ಇದಕ್ಕೆ ಶರನ್ನವರಾತ್ರಿಯೆನ್ನುತ್ತಾರೆ ಈ ನವರಾತ್ರಿ ಅಥವಾ ದಸರಾ ಹಬ್ಬವನ್ನು ಹಿಂದೂಗಳು ಶ್ರದ್ಧಾ ಭಕ್ತಿಗಳಿಂದ, ಸಡಗರ–ಸಂಭ್ರಮಗಳಿಂದ ಆಚರಿಸುತ್ತಾರೆ. ಈ ದಿನಗಳಲ್ಲಿ ಶಕ್ತಿಯ ಪ್ರಮುಖ ಅಂಶಗಳಾದ ಲಕ್ಷ್ಮಿ–ಸರಸ್ವತಿ – ದುರ್ಗಾ – ಈ ಮೂರು ದೇವತೆಗಳನ್ನೂ ಪೂಜಿಸುತ್ತಾರೆ ಲಲಿತಾ ಸಹಸ್ರನಾಮ, ದುರ್ಗಾ ಸಪ್ತಶತಿಗಳ ಪಾರಾಯಣ, ದೇವೀ ಸ್ತೋತ್ರಗಳ ಪಠನ, ಹೋಮ, ಜಪ, ಧ್ಯಾನ, ಉಪವಾಸ, ವ್ರತ, ನಿಯಮಗಳನ್ನು ಭಕ್ತರು ವಿಧಿವತ್ತಾಗಿ ನವರಾತ್ರಿಯಲ್ಲಿ ಆಚರಿಸುತ್ತಾರೆ. ಶಕ್ತಿ, ಯಂತ್ರ, ಪೂಜೆ, ಮತ್ತು ಸುಮಂಗಲಿಯರನ್ನು ಹಾಗೂ ಕನ್ಯಾ–ಕುಮಾರಿಯರನ್ನು ದೇವಿಯ ಅಂಶವೆಂದು ತಿಳಿದು ಪೂಜಿಸುತ್ತಾರೆ. ಅಷ್ಟಮಿ, ನವಮಿ, ಚತುರ್ದಶಿಗಳು, ಶುಕ್ರವಾರ, ಭಾನುವಾರ, ಜನ್ಮತಿಥಿಗಳು ದೇವಿಯ ಉಪಾಸನೆಗೆ ಅರ್ಚನೆಗೆ, ಪಾರಾಯಣಕ್ಕೆ ಪ್ರಶಸ್ತವಾದ ದಿನಗಳು.

ಲಲಿತೋಪಾಖ್ಯಾನ ಹಾಗೂ ದುರ್ಗಾ ಸಪ್ತಶತಿಗಳ ಕಾವ್ಯಸೌಂದರ್ಯ ಗಣನೀಯ

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

—ತಿ. ತಿ. ದೇ.

ವಾದುದು. ದೇವಿಯ ರೂಪಲಾವಣ್ಯ, ಸೊಬಗಿನ ವರ್ಣನೆಗಳು, ಅವಳ ಶಕ್ತಿ-ಸಾಮರ್ಥ್ಯ ಗುಣ ವಿಶೇಷಗಳು ಮತ್ತು ಅವಳ ಮಹಾತ್ಮೆಯನ್ನು ತಿಳಿಸುವ ವಿವರಣೆಗಳ ಸೊಬಗನ್ನು ಅರಿಯಲು ಮೂಲ ಶ್ಲೋಕಗಳನ್ನೇ ನೋಡಬೇಕು. ಉದಾಹರಣೆಗೆ ಕೆಲವನ್ನು ಗಮನಿಸಬಹುದು.

ಭಗವತಿ ಲಲಿತಳಿಗೆ ಎಲ್ಲಾ ಮಾನವರಂತೆ ಜನನವಿದೆ ಲಲಿತಾ ಸಹಸ್ರನಾಮದಲ್ಲಿ ಇದಕ್ಕೆ ಸಾಕಷ್ಟು ಆಧಾರಗಳಿವೆ ದೇವಿಯು 'ಚಿದಗ್ನಿ ಕುಂಡ ಸಂಭೂತಳು'. ಅವಿದ್ಯಾರೂಪವಾದ ತಮಸ್ಸಿಗೆ ವಿರೋಧವಾದ ಅಗ್ನಿಕುಂಡದಿಂದ ಜನಿಸಿದವಳು. (ಚಿದಗ್ನಿ ಕುಂಡ ಸಂಭೂತಾ); ಭಂಡಾಸುರ-ಮಹಿಷಾಸುರರ ವಧೆ, ಮೊದಲಾದ ದೇವತಾ ಕಾರ್ಯಗಳಿಗಾಗಿ ಆವಿರ್ಭವಿಸಿದ್ದಳು. (ದೇವಕಾರ್ಯ ಸಮುದ್ಯತಾ) ಅವಳಿಗೆ ಜನನ ವಿಲ್ಲೆಂದೂ ತಿಳಿಸುವ ಉಲ್ಲೇಖಗಳಿವೆ 'ಅಜಾ', 'ಅಯೋನಿ' – ಆದರೆ ಅವಳಿಗೆ ಜನನವಿಲ್ಲೆಂದು ಹೇಳುವ ವಿಶೇಷಣಗಳಿಗಿಂತ ಜನನವಿದೆ ಎಂದು ಹೇಳುವ ವಿಶೇಷಣಗಳು ಹೆಚ್ಚಾಗಿವೆ. 'ಕಾಂತಾ', 'ಕಾಂತಾರ್ಧ ವಿಗ್ರಹ', 'ತ್ರಿಪುರ ಸುಂದರಿ'– ಈ ವಿಶೇಷಣಗಳು ದೇವಿಯನ್ನು ಅತ್ಯಂತ ಸುಂದರ ಳೆಂದೂ, ಕಾಂತಿಯುಕ್ತಳೆಂದೂ, ಲಾವಣ್ಯವತಿ ಯೆಂದೂ ವರ್ಣಿಸುತ್ತವೆ. 'ದಿವ್ಯಗಂಧಾಢ್ಯಾ', 'ಸಿಂಧೂರ ತಿಲಕಾಂಚಿತಾ'– ಈ ವಿಶೇಷಣಗಳು ಅವಳು ತನ್ನ ಸುಂದರವಾದ ದೇಹಕ್ಕೆ ಸುಗಂಧ ದ್ರವ್ಯಗಳನ್ನು ಲೇಪಿಸುತ್ತಾಳೆಂದು ತಿಳಿಸುತ್ತವೆ ಅಥವಾ ಅವಳ ದೇಹದಿಂದಲೇ ಸುಗಂಧವು ಹೊರ ಹೊಮ್ಮುತ್ತಿತ್ತು ಎಂಬುದನ್ನು ಸೂಚಿಸುತ್ತವೆ. ದೇವಿಯು ಶಾಖಾಹಾರ ಮತ್ತು ಮಾಂಸಾಹಾರ ಗಳೆರಡನ್ನೂ ಸೇವಿಸುತ್ತಾಳೆ 'ಹರಿದ್ರಾನ್ನೈಕ ರಸಿಕಾ'; 'ದಧ್ಯನ್ನಾಸಕ್ತ ಹೃದಯಾ', 'ಗುಡಾನ್ನಪ್ರೀತ ಮಾನಸಾ'; 'ಪಾಯಸಾನ್ನ ಪ್ರಿಯಾ' – ಇತ್ಯಾದಿ. 'ಮಾಂಸನಿಷ್ಠಾ' ಎಂಬುದು ಅವಳ ಮಾಂಸಾಹಾರಪ್ರಿಯತೆಯನ್ನು ಸೂಚಿಸುತ್ತದೆ. ಭಕ್ತನು ಪ್ರೀತಿಯಿಂದ ಭಕ್ತಿ ಯಿಂದ ಏನನ್ನು ಕೊಡುತ್ತಾನೋ ಅದು ದೇವಿಗೆ ಪ್ರಿಯವಾಗುತ್ತದೆ ಎನ್ನುವುದು ಇಲ್ಲಿ ಮುಖ್ಯ. 'ಸರ್ವೌದನ ಪ್ರೀತ ಚಿತ್ತಾ'. ಆದರೆ, ಅವಳಿಗೆ ಅತಿ ಹೆಚ್ಚಿನ ಆಹಾರ ಅಗತ್ಯವಾಗಿ ಬೇಕು. 'ಮಹಾಶನಾ'; 'ಮಹಾಗ್ರಾಸಾ' ದೇವಿಗೆ ಪಾನೀಯವನ್ನು ಸೇವಿಸುವುದೆಂದರೆ ಬಹಳ ಇಷ್ಟ. ಅವಳು ಪಾನಪ್ರಿಯಳು 'ಗುಡೋದಕ'; 'ಮಧು ಪ್ರೀತಾ'; 'ಮಾಧ್ವೀ ಪಾನಾಲಸಾಮತ್ತಾ'– ಇತ್ಯಾದಿ ಅವಳು ತಾಂಬೂಲವನ್ನು ಸೇವಿ ಸುತ್ತಾಳೆ. 'ತಾಂಬೂಲಪೂರಿತ ಮುಖೀ'– ಹೀಗೆ ದೇವಿಯು ಆಹಾರ ಪಾನೀಯಗಳನ್ನು ತನಗೆ ತೃಪ್ತಿಯಾಗುವವರೆಗೂ ಸೇವಿಸುತ್ತಾಳೆ.

ದೇವಿಯು ಸರ್ವಾಂತರ್ಯಾಮಿಯಾದರೂ ಅವಳಿಗೆ ಪ್ರತ್ಯೇಕವಾದ ನಿವಾಸ ಸ್ಥಾನವಿದೆ. ಅವಳು ಆವಾಸ ಸ್ಥಾನವುಳ್ಳವಳು. ಉದಾ – 'ಮಹಾಪದ್ಮಾಟವೀಸಂಸ್ಥಾ'; 'ಕದಂಬವನ ವಾಸಿನೀ'; 'ಸುಮೇರು ಶೃಂಗ ಮಧ್ಯಸ್ಥಾ'; 'ಸುಧಾಸಾಗರ ಮಧ್ಯಸ್ಥಾ'; 'ವಿಂಧ್ಯಾಚಲ ನಿವಾಸಿನೀ'; 'ಭಾನುಮಂಡಲ ಮಧ್ಯಸ್ಥಾ' – ಇತ್ಯಾದಿ. ಅವಳು ಚಿಂತಾಮಣಿಗಳಿಂದ ಮಾಡಿದ ಮನೆಗಳಲ್ಲಿ ವಾಸಿಸುತ್ತಾಳೆ ಚಿಂತಾಮಣಿ ಗೃಹಾಂತಸ್ಥಾ' ತ್ರಿಲೋಕಗಳಲ್ಲಿಯೂ ವಾಸಿ ಸುತ್ತಾಳೆ. ತ್ರಿವರ್ಗನಿಲಯಾ-ಅವಳು ಭಕ್ತರ ಹೃದಯಗಳಲ್ಲಿ ನೆಲೆಸಿರುತ್ತಾಳೆ – ಹೃದಯಸ್ಥಾ; ಭಕ್ತಮಾನಸ ಹಂಸಿಕಾ– ಇತ್ಯಾದಿ ಅವಳು ಭಕ್ತರಿಗೆ ಅತಿ ಸಮೀಪದಲ್ಲಿ ಇರುವವಳೂ ಹೌದು ಅತಿ ದೂರದಲ್ಲಿ ಇರುವವಳೂ ಹೌದು. ಅವಳು ಅತಿ ಸುಲಭಳೂ ಹೌದು ಅತಿ ದುರ್ಲಭಳೂ ಹೌದು. ಹೀಗೆ ದೇವಿಯು ಸರ್ವಾಂತರ್ಯಾಮಿತ ವನ್ನು ಸಹಸ್ರನಾಮವು ತಿಳಿಸುತ್ತದೆ.

ದೇವಿಯು ತನ್ನ ಸುಖ, ಸಂತೋಷಕ್ಕಾಗಿ ಅನೇಕ ವಾಹನಗಳನ್ನು ಪಡೆದಿದ್ದಾಳೆ. ಚಕ್ರರಾಜ ರಥಾರೂಢಾ, ಅಶ್ವಾರೂಢಾ, ಸಿಂಹವಾಹಿನೀ- ಇತ್ಯಾದಿ. ಅವಳಿಗೆ ಬಹು ರೂಪಗಳುಂಟು. ಭೂಮರೂಪಾ, ಸಹಸ್ರಾಕ್ಷಿ– ಇವೆಲ್ಲ ಅವಳ ಬೃಹತ್ ಮತ್ತು ಮಹತ್ತನ್ನು ಸಂಕೇತಿಸುತ್ತವೆ. ಈ ಎಲ್ಲ ಕಲ್ಪನೆಯು ಭಕ್ತನ ಮನಸ್ಸನ್ನು ಅವಲಂಬಿಸಿರುತ್ತದೆ ಎನ್ನುವುದು ಬಹಳ ಮುಖ್ಯ. ಅವಳು ದುಷ್ಟರಿಗೆ ಭಯಂಕರಿ ಶಿಷ್ಟರಿಗೆ ಸ್ಫೂರ್ತಿ ದಾಯಿನಿ. ಮಾತೃಸ್ವರೂಪಳು, ವಾತ್ಸಲ್ಯಮಯಿ



# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳಿಸಿ ಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಕೆ. ವಿಜಯಕುಮಾರ್
ಭವಾನಿಶಂಕರ್ ಏಜನ್ಸಿ
ಕೆ.ಎಂ. ಹಳ್ಳಿ, ಕೂಡ್ಲಿಗಿ

ಸಿ.ಪಿ. ರಾಮಕೃಷ್ಣ
ಜವಳಿ ವ್ಯಾಪಾರಿಗಳು
ಚಾಮರಾಜನಗರ.

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್. ಶ್ರೀಕಂಠಯ್ಯ
ಶ್ರೀನಿಧಿ ಸ್ಟೋರ್ಸ್, ಕರ್ನಾಟಕ ಸಂಘ ರಸ್ತೆ
ಜಾಲಹಳ್ಳಿ, ಬೆಂಗಳೂರು.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕ ಬಳ್ಳಾಪುರ.

ವೆಂಕಟೇಶ ಶಿವಾಜಿ ಝಿಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ವಿ.ಎಸ್. ಗೋಪಾಲಕೃಷ್ಣ
ಬೃಂದಾವನ ಸ್ಟೋರ್ಸ್
10/125. 9ನೇ-ಮೇನ್ 3ನೇ ಬ್ಲಾಕ್
ಜಯನಗರ, ಬೆಂಗಳೂರು.

ಕೆ.ಎಸ್. ವೆಂಕಟಾಚಲಪತಿಶೆಟ್ಟಿ
ರಮೇಶ್ ಸ್ಟೋರ್ಸ್
ಕುಣಿಗಲ್.

ಆರ್.ಜಿ ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಡಿ. ಗೋಪಾಲಶೆಟ್ಟಿ
ನ್ಯೂಸ್‌ಏಜಂಟ್
ಶಿವಾನಂದಸ್ಟೋರ್ಸ್. ಮದ್ದೂರು.

ಬಿ.ಕೆ. ವೆಂಕಟೇಶನ್
ಆಡಿಟರ್, 1759, 9ನೇ ಕ್ರಾಸ್
ತುಮಕೂರು.

ಬಿ.ಎಸಿ. ಭಟ್
ಉದಯವಾಣಿ ಏಜಂಟ್
ಕಾಳೇಶ್ವರ.

ಸುಬ್ಬಾರಾವ್
ನ್ಯೂಸ್‌ಏಜಂಟ್, ಆಸ್ಪತ್ರೆರಸ್ತೆ
ಮಧುಗಿರಿ.

ವೈ.ಎಸ್. ಮಲ್ಲಿಕಾರ್ಜುನ ಶೆಟ್ಟಿ
ಸ್ಟೇಟ್‌ಬ್ಯಾಂಕ್ ಆಫ್ ಮೈಸೂರ್ ಬಳಿ
ಕೂಡ್ಲಿಗಿ.

ವೆಂಕಟೇಶ್ವರ ಕಾಫಿವರ್ಕ್ಸ್, ಅಂಡ್ ಬುಕ್‌ಡಿಪೋ
ಜಯಲಕ್ಷ್ಮಿ ಬಿಲ್ಡಿಂಗ್ಸ್, 610 ಬಸ್‌ಸ್ಟಾಂಡ್ ರಸ್ತೆ
ಮಂಡ್ಯ.

ಪಿ.ಎಸ್. ನಾಗರತ್ನಮ್ಮ
W/o ಪಿ.ಸತ್ಯನಾರಾಯಣ.ನಟೇಶ್‌ಕಾಂಪೌಂಡ್
ಬಂಗಾರಪೇಟೆ.

ಆನಂದರಾವ್. ನಿವೃತ್ತ ಉಪಾಧ್ಯಾಯರು
ಶಿವಪ್ಪ ನಾಯಕನಗರ
ಸಾಗರ.

ಎಸ್. ರತ್ನಮ್ಮ
ಸಲ್ಲಾಪುರ. ತರೀಕೆರೆ.

ಎಂ ಎಸ್. ಕೃಷ್ಣಮೂರ್ತಿ
ಉತ್ತರಾದಿಮಠ
ಚಿತ್ರದುರ್ಗ

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳ ಬುರುಜು ಹಿಂಭಾಗದರಸ್ತೆ
ಬಿಜಾಪುರ.

ಎಸ್. ಮೂಡಲಗಿರಿರಾಜ
S/o ಶ್ರೀ ರಂಗಶೆಟ್ಟಿ,ಸಪ್ತಗಿರಿ ನಿಲಯ
ಭರಮಸಾಗರ.

ಶ್ರೀಮತಿ ರಾಜಗುರು
C/o ಡಿ.ಎಸ್.ಆರ್. ರಾಜಗುರು
ಸರ್ಕಾರಿ ಜೂನಿಯರ್‌ಕಾಲೇಜು, ಮಾನವಿ

ವಿ.ಎಸ್. ಭಾಗ್ಯರಾಜಶೆಟ್ಟಿ
ಹುಲಿಕಲ್ಲು,ಅರಕಲಗೂಡು(ತಾ)
ಹಾಸನ.

ಕೆ.ಎಂ. ಶ್ರೀನಿವಾಸಮೂರ್ತಿ
ಪತ್ರಕರ್ತರು.ಓಲ್ಡ್‌ಟೌನ್
ಭದ್ರಾವತಿ.

ಎ.ಎಂ. ಶ್ರೀನಿವಾಸ್.
ವಿನಾಯಕ ಟೈಲರ್ಸ್ ದೊಡ್ಡಪೇಟೆ
ಕೋಲಾರ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟಾಂಡ್‌ರೋಡ್
ಗಂಗಾವತಿ.

ಆರ್.ಶೇಷಾದ್ರಿ. ಅರ್ಚಕರು,
ಶ್ರೀಲಕ್ಷ್ಮೀನಾರಾಯಣಸ್ವಾಮಿದೇವಾಲಯ
ಕೊಳ್ಳೇಗಾಲ.

ಬಿ.ಎನ್. ಮುಕುಂದ
1275,ಶ್ರೀಪಾದರಾಜ ಮಠದ ಎದುರು
ಮುಳಬಾಗಿಲು.

ಕೆ ಎಸ್. ಲಕ್ಷ್ಮೀಕಾಂತ
ಎನ್.ಎ 93 ಬಿ.ಇ.ಎಲ್. ಕಾಲೋನಿ
ಜಾಲಹಳ್ಳಿ, ಬೆಂಗಳೂರು.

ಟಿ ಕೆ ರಾಮಸ್ವಾಮಿ
ತಿರುಪತಿ ವೆಂಕಟೇಶ್ವರ ಸೈಕಲ್‌ಷಾಪ್
ಬಿ ಎಚ್. ರೋಡ್, ತರೀಕೆರೆ.

ಪ್ರೇಮಾವತಿ
W/o ಪಿ. ಸಾರಂಗಪಾಣಿ. ರೋಜರ್ಸ್ ಕ್ಯಾಂಪ್
ಬಿ ಪಿ ಬ್ಲಾಕ್
ಮಾರಿಕುಪ್ಪಂ ಕೆ.ಜಿ.ಎಫ್.

ಡಿ ಗೋಪಾಲಶೆಟ್ಟಿ
ಮದ್ದೂರು.

ಆರ್.ವಾಸುದೇವಶೆಟ್ಟಿ
ದಳಸನೂರು.

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಆಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ಸಂಪಾದಕರು ತಿ.ತಿ.ದೇ. ತಿರುಪತಿ.**

ಕರುಣಾಮಯಿ, ಜಗಜ್ಜನನಿ. ದೇವಿಗೆ ಬಿಲ್ವ, ತುಳಸಿ, ಪತ್ರಗಳು ಮತ್ತು ಪದ್ಮ, ಚಂಪಕ, ಅಶೋಕ, ಸುಗಂಧಿ, ಪುನ್ನಾಗ, ಕಲ್ಹಾರ, ಕದಂಬ, ಜಾಜಿ, ಮಲ್ಲಿಕಾ– ಮೊದಲಾದ ಹೂವುಗಳು ಪ್ರಿಯವಾಗಿವೆ. ದುರ್ಗಾಪೂಜೆಗೆ ಕೆಂಪು ಹೂಗಳು ಆದರಲ್ಲೂ ಕೆಂಪು ದಾಸವಾಳದ ಹೂವು ಅತ್ಯಂತ ಪ್ರಿಯವಾದುದು.

ದೇವಾಧಿದೇವತೆಗಳ ಸಮೂಹದಲ್ಲಿ ಜಗತ್ತಿನ ಸಕಲ ಚರಾಚರ ಸೃಷ್ಟಿಯಲ್ಲಿ ದೇವಿಯು ವಿಶಿಷ್ಟವಾದ ಸ್ಥಾನ-ಮಾನಗಳನ್ನು ಪಡೆದಿದ್ದಾಳೆ. ಸೃಷ್ಟಿ ಸ್ಥಿತಿ-ಲಯ ಕಾರಕವಾದ ತ್ರಿಮೂರ್ತಿಗಳು ಅವಳ ಸಹಾಯಕರಾದರೂ ಕೂಡ ಅವಳ ಸಂಕಲ್ಪವೇ ಮೇಲುಗೈಯಾಗಿರುತ್ತದೆ. ಅವಳು ಇಚ್ಛಾಶಕ್ತಿ, ಕ್ರಿಯಾಶಕ್ತಿ, ಜ್ಞಾನಶಕ್ತಿ, ಸ್ವರೂಪಿಣಿಯಾಗಿದ್ದಾಳೆ– ಸರ್ವಾನುಲ್ಲಂಘ್ಯ ಶಾಸನಾ- ಇತ್ಯಾದಿ. ಅವಳು ಜಗತ್ತಿನ ಎಲ್ಲಾ ಶಕ್ತಿ-ಸಾಮರ್ಥ್ಯಗಳ ಮೂಲ ಸ್ವರೂಪಳೆಂದು ಈ ಮಾತುಗಳು ದೃಢಪಡಿಸುತ್ತವೆ.

ಶಂಕರಾಚಾರ್ಯ ವಿರಚಿತ ಅನ್ನಪೂರ್ಣಾ ಸ್ತೋತ್ರದಲ್ಲಿ ದೇವಿಯ ಪರವಾಗಿರುವ ಕೆಳಗಿನ ಕೆಲವು ವಿಶೇಷಣಗಳು ದೇವಿಯ ಬೃಹತ್ತಿಗೆ, ಭವ್ಯತೆಗೆ, ಮಹತ್ತಿಗೆ, ಬುದ್ಧಿಮತ್ತೆಗೆ ಸಾಕ್ಷಿಯಾಗಿವೆ ದೇವಿಯು ಸಂಪತ್ತು, ವಿದ್ಯೆ, ಆಸೆ-ಆಕಾಂಕ್ಷೆಗಳಿಗೆ ಆಗರವಾಗಿದ್ದಾಳೆ. ಅವಳು ಮೋಕ್ಷಪ್ರದಾಯಿನಿ. ಸರ್ವೈಶ್ವರ್ಯ ಸಮಸ್ತ ವಾಂಛಿತಕರೀ, ರಿಪುಕ್ಷಯಕರೀ, ನಿತ್ಯಾನಂದಕರೀ, ಭಕ್ತಾಭೀಷ್ಟಕರೀ, ವಿಜ್ಞಾನ ದೀಪಾಂಕುರಿ, ಲೀಲಾನಾಟಕ ಸೂತ್ರಭೇದನಕರೀ, ನಿಗಮಾರ್ಥ ಗೋಚರಕರೀ, ಸೌಂದರ್ಯರತ್ನಾಕರೀ, ಮೋಕ್ಷದ್ವಾರಕಪಾಟಪಾಟನಕರೀ– ಇತ್ಯಾದಿ.

ಲಾವಣ್ಯವತಿಯಾದ ಭಗವತಿಯು ಕಲಾಭಿಜ್ಞಳು. ಕಲಾಭಿಮಾನಿ. ಸಂಗೀತ, ನೃತ್ಯ ಮೊದಲಾದ ಲಲಿತ ಕಲೆಗಳಲ್ಲಿ ಪರಿಣಿತಳು. ಕಾವ್ಯ ಕಲಾಪ ವಿನೋದಿನಿ, ನಾಟ್ಯಪ್ರಿಯಾ, ಸಂಗೀತ ಪ್ರಿಯಾ, ಲಯಕರೀ, ಕಲಾನಿಧಿ, ಕಾವ್ಯಕಲಾ– ಮೊದಲಾದ ವಿಶೇಷಣಗಳು ದೇವಿಯ ಕಲಾಭಿಜ್ಞತೆಯನ್ನು ಸೂಚಿಸುತ್ತವೆ. ವೇದಾಂತ, ತಂತ್ರ- ಮೊದಲಾದ ಆಧ್ಯಾತ್ಮಿಕ ಪದ್ಧತಿಗಳಿಗೆ ಅವಳು ಆಧಾರ ಸ್ವರೂಪಳು. ಮಹಾಮಂತ್ರಾ, ಆತ್ಮವಿದ್ಯಾ, ಸರ್ವವೇದಾಂತ ಸಂವೇದ್ಯಾ–ಇತ್ಯಾದಿ. ದುರ್ಗಾ ಸಪ್ತಶತಿಯಲ್ಲಿ ತಾಂತ್ರಿಕ ಪದಗಳಾದ 'ಐಂ, ಹ್ರೀಂ, ಕ್ಲೀಂ'–ಎಂಬ ಬೀಜಾಕ್ಷರಗಳು ಮಹತ್ವದವುಗಳಾಗಿವೆ. ಈ ಬೀಜಾಕ್ಷರಗಳು ದೇವಿಯ ಮೂರು ಮುಖ್ಯ ಸ್ವರೂಪವನ್ನು ಪ್ರತಿಬಿಂಬಿಸುತ್ತವೆ. ಹ್ರೀಂಕಾರ ನಿಲಯಾ ಎಂದು ಪಾರ್ವತಿಯನ್ನು ಸಂಬೋಧಿಸುತ್ತಾರೆ. ಹ್ರೀಂ ಎಂಬುದು ದೇವಿಯ ಆದಿಶಕ್ತಿ ಸ್ವರೂಪವನ್ನು ಸೂಚಿಸುತ್ತದೆ.

ದುರ್ಗಾಸಪ್ತಶತಿಯಲ್ಲಿ ದುರ್ಗಾದೇವಿಯ ಮೂಲ ಸ್ವರೂಪವನ್ನು ತಿಳಿಸುವ ವಿವರಗಳು ಹೀಗಿವೆ. ಶಿವ-ಪಾರ್ವತಿಯರು ಜಗತ್ತಿನ ಸೃಷ್ಟಿಗೆ ಕಾರಣರಾದ ಆದಿಶಕ್ತಿ ಸ್ವರೂಪರು. ಹೀಗಾಗಿ ಅವರು ಕಾಮನಿಗೆ ಪ್ರಾಶಸ್ತ್ಯ ನೀಡಿ ಕಾಮೇಶ್ವರ ಮತ್ತು ಕಾಮೇಶ್ವರಿ ಎಂದು ಪ್ರಸಿದ್ಧರಾದರು. ಶಕ್ತಿ ಇಲ್ಲದ ಶಿವನು ಅಸಮರ್ಥ; ಹಾಗೆಯೇ ಶಿವನಿಲ್ಲದ ಶಿವೆಯು ಅಪೂರ್ಣ (ಸೌಂದರ್ಯಲಹರಿ: 1.1) ಶಿವ-ಪಾರ್ವತಿಯರ ಈ ಅಭೇದವಾದ ಸಂಯೋಗವನ್ನು ಶಕ್ತಿ ಎನ್ನುತ್ತಾರೆ. ಶಕ್ತಿ



ಯನ್ನು ಪೂಜಿಸುವ ಈ ಕ್ರಮವೇ ಶಕ್ತಿ ಉಪಾಸನೆಗೆ ಮೊದಲಾಯಿತು. ಉದಾ :– ನಿಶ್ಶೇಷ ದೇವಗಣ ಸಮೂಹ ಮೂರ್ತಿಃ, ತೇಜಃ ಸಮೂಹಂ, ಸರ್ವದೇವಶರೀರಜಂ – ಇತ್ಯಾದಿ – ಹೀಗೆ ದೇವಾದಿದೇವತೆಗಳ ತೇಜಸ್ಸೆಲ್ಲವೂ ಒಟ್ಟು, ಗೂಡಿ ಸ್ತ್ರೀರೂಪ ತಾಳಿದುದನ್ನು ದುರ್ಗಾ ಸಪ್ತಶತಿ ವರ್ಣಿಸುತ್ತದೆ. ದುರ್ಗಾ ಎಂದರೆ ಎಂತಹ ಕಷ್ಟ ಸಂಕಟಗಳನ್ನೂ ನಿವಾರಿಸುವ ಶಕ್ತಿಯುಳ್ಳವಳು ಎಂದು ಅರ್ಥವಾಗುತ್ತದೆ. 'ದುರ್ಗೆ ದುರ್ಗಾರ್ತಿನಾಶಿನೀ'. ದುರ್ಗೆಯು ವಿಷ್ಣುವಿನ ಕಣ್ಣುಗಳಲ್ಲಿ ವಾಸಿಸುವ ದೇವತೆ ಅವಳು ಯೋಗ ನಿದ್ರಾದೇವಿ. ಹರಿನೇತ್ರ ಕರ್ತಾಲಯವ್ – ಒಟ್ಟಿನಲ್ಲಿ, ಈ ಶಕ್ತಿಸಂಹಿತೆಗಳು ದೇವಿಯನ್ನು ಮಹಾಮಾತೆಯೆಂದೂ ಆದಿಶಕ್ತಿ ಸ್ವರೂಪಳೆಂದೂ ಸರ್ವಶಾಸ್ತ್ರ ಪಾರಂಗತಳೆಂದೂ, ಲಲಿತ ಕಲೆಗಳ ಆಗರಳೆಂದೂ, ಯುದ್ಧ ವಿಶಾರದೆಯೆಂದೂ–ವಿಶೇಷವಾಗಿ ವರ್ಣಿಸಿವೆ. ಇವುಗಳ ಕಾವ್ಯಸೌಂದರ್ಯವನ್ನು ಸಾಹಿತ್ಯದ ಸೊಬಗನ್ನು ಓದಿಯೇ ತಣಿಯಬೇಕು.

ದೇವಿಯ ಈ ಅದ್ಭುತಶಕ್ತಿಯ ಹಿರಿಮೆ–ಗರಿಮೆ ಗುಣಾತಿಶಯ, ಸೊಬಗು, ರೂಪಲಾವಣ್ಯಗಳನ್ನು ಕುರಿತಂತೆ ಸಂತರು, ಕೀರ್ತನಕಾರರು, ವಾಗ್ಗೇಯಕಾರರು, ಕವಿಗಳು, ರಾಜ – ಮಹಾರಾಜರು– ಮೊದಲಾದವರು ಅಸಂಖ್ಯವಾದ ಕೀರ್ತನೆಗಳನ್ನು, ಭಕ್ತಿ ಗೀತೆಗಳನ್ನು, ಸ್ತೋತ್ರಮಾಲಿಕೆಗಳನ್ನು ರಚಿಸಿ ಕೊಂಡಾಡಿದ್ದಾರೆ. ಕಾಳಿದಾಸನ ಶ್ಯಾಮಲಾದಂಡಕ, ಶಂಕರಾಚಾರ್ಯರ ದೇವೀ ಪರವಾದ ಸ್ತೋತ್ರಮಾಲಿಕೆಗಳು, ದೀಕ್ಷಿತರ ಕೀರ್ತನೆಗಳು– ಮೊದಲಾದುವುಗಳನ್ನು ನಮ್ಮ ಸಂಗೀತಕಾರರು ತಮ್ಮ ಸುಶ್ರಾವ್ಯ ಕಂಠದಿಂದ ಹಾಡಿ ಭಕ್ತರ ಹಾಗೂ ಸಂಗೀತ ರಸಿಕರ ಮನಸ್ಸನ್ನು ಸೂರೆಗೊಂಡಿದ್ದಾರೆ. ಅಲ್ಲದೆ, ನೃತ್ಯ, ನಾಟಕ, ನೃತ್ಯ–ನಾಟಕಗಳು, ಸಂಗೀತ ರೂಪಕಗಳು, ಚಲನಚಿತ್ರಗಳು– ಇವೇ ಮೊದಲಾದ ದೃಶ್ಯ–ಕಲಾ ಮಾಧ್ಯಮಗಳು ದೇವಿಯ ಸೊಬಗು-ಶಕ್ತಿ-ಸಾಮರ್ಥ್ಯಗಳನ್ನು ವೈಭವೀಕರಿಸಿ ಜನರನ್ನು ರಂಜಿಸುತ್ತಿವೆ, ಆಕರ್ಷಿಸುತ್ತವೆ. ಮಾತ್ರವಲ್ಲ, ದೇವಿಯ ಮಹಿಮೆಯನ್ನು ಕುರಿತಂತೆ ಜನರಿಗೆ ತಿಳಿವಳಿಕೆ ನೀಡುವುದರಲ್ಲಿ ಸಫಲವಾಗಿವೆ ಬಂಗಾಳದ ರಾಮಕೃಷ್ಣ ಪರಮಹಂಸರು ಕಾಳಿ ಮಾತೆಯ ಉಪಾಸಕರೆಂದೂ, ಆರಾಧಕರೆಂದೂ ಪ್ರಸಿದ್ಧರಾಗಿದ್ದಾರೆ ಅವಳನ್ನು ಒಲಿಸಿಕೊಳ್ಳಲು, ಅವಳ ಸಾಮರ್ಥ್ಯ, ಮಹತ್ತ್ವವನ್ನು ಅರಿಯಲು ಅವರು ತಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದು ಜಗದ್ವಿಖ್ಯಾತವಾಗಿದೆ.

ಈ ಶಕ್ತಿದೇವತೆ ಅಥವಾ ದುರ್ಗಾಮಾತೆಯು ಶತಶತಮಾನಗಳಿಂದಲೂ ಭಾರತಾದ್ಯಂತವೂ ಪೂಜಾರ್ಹಳಾಗಿದ್ದಾಳೆ. ಅವಳು ದಕ್ಷಿಣ ಭಾರತದಲ್ಲಿ ಹೆಚ್ಚಾಗಿ ರೌದ್ರ ರೂಪದಲ್ಲಿ ಕಾಣಿಸಿಕೊಂಡಿದ್ದಾಳೆ. ದುರ್ಗಾ, ಚಾಮುಂಡಿ, ಮಹಿಷಾಸುರ ಮರ್ಧಿನಿ– ಇತ್ಯಾದಿ. ಕೇರಳದಲ್ಲಿ ಭಗವತಿ ಎಂದು ಪ್ರಸಿದ್ಧಳಾಗಿದ್ದಾಳೆ. ತಮಿಳು ನಾಡಿನಲ್ಲಿ ಕನ್ಯಾಕುಮಾರಿ, ಮೀನಾಕ್ಷಿ, ಕಾಮಾಕ್ಷಿ– ಎಂದು ಪ್ರಖ್ಯಾತಳಾಗಿದ್ದಾಳೆ. ಪಶ್ಚಿಮ ಬಂಗಾಳ, ಬಿಹಾರ, ಅಸ್ಸಾಂ – ಗಳಲ್ಲಿ ದುರ್ಗಾ, ಕಾಳಿ–ಎಂದು ವಿಶಿಷ್ಟ ಸ್ಥಾನ ಗಳಿಸಿದ್ದಾಳೆ. ಆಂಧ್ರಪ್ರದೇಶದಲ್ಲಿ ಕನಕದುರ್ಗ, ಲಲಿತಾ, ಜೋಗುಲಾಂಬ – ಎಂದು ಪ್ರಸಿದ್ಧಳಾಗಿದ್ದಾಳೆ. ಮಹಾರಾಷ್ಟ್ರ, ಗುಜರಾತ್‌ಗಳಲ್ಲಿ ಅಂಬಾ, ಭವಾನಿ, ಮಹಾಲಕ್ಷ್ಮಿ–ಎಂಬ ಹೆಸರುಗಳಿಂದ ಪೂಜೆಗೊಳ್ಳುತ್ತಾಳೆ. ಮಹಾರಾಷ್ಟ್ರ,

ಕರ್ನಾಟಕಗಳಲ್ಲಿ ಈ ಹಬ್ಬವನ್ನು 'ನವರಾತ್ರಿ' 'ದಸರಾ' ಎಂದು ನಾಡಹಬ್ಬವಾಗಿ ಆಚರಿಸಿದರೆ, ಉಳಿದೆಡೆ ದುರ್ಗಾಪೂಜೆ ಎಂದು ಆಚರಿಸುತ್ತಾರೆ ದೆಹಲಿಯಲ್ಲಿ ರಾಮಲೀಲಾ ನಾಟಕವನ್ನು ಆಚರಿಸುತ್ತಾರೆ. ದಶ-ಹರಾ (ದಶಹರಾ, ದಸರಾ) ರಾವಣನನ್ನು ಕೊಂದ ರಾಮನ ವಿಜಯೋತ್ಸವದ ಪ್ರತೀಕವಾಗಿದೆ ಈ ಹಬ್ಬ. ನವರಾತ್ರಿಯ ಏಳನೆಯ ದಿನದಿಂದ ಪ್ರಾರಂಭವಾಗುವ ದುರ್ಗಾ ಪೂಜೆ ವಿಜಯದಶಮಿಯಂದು ದುರ್ಗೆಯ ವಿಸರ್ಜನೆಯೊಂದಿಗೆ ಮುಗಿಯುತ್ತದೆ. ಹೆಣ್ಣು ಮಗಳನ್ನು ತವರು ಮನೆಯಿಂದ ಕಳುಹಿಸಿಕೊಡುವಂತೆ ಬಂಗಾಳಿಗಳು ದುರ್ಗೆಯನ್ನು ಕಳುಹಿಸುತ್ತಾರೆ. ನಮ್ಮಲ್ಲಿ ಗೌರಿಯನ್ನು ಕಳುಹಿಸಿಕೊಡುವಂತೆ ಕಲ್ಕತ್ತಾ ದುರ್ಗೆಯ ತವರು ಮನೆಯೆಂದು ಬಂಗಾಳಿಗಳು ಹೇಳುತ್ತಾರೆ

ವೈಶ್ಯ ಕುಲದವರು ಕನ್ನಿಕಾಪರಮೇಶ್ವರಿಯನ್ನು ಆರಾಧಿಸುತ್ತಾರೆ. ಇವರು ವಾಸವಿ ಪಂಥದವರು. ವೈಶ್ಯ ಕನ್ಯೆ ವಾಸವಿಯನ್ನು ಕ್ಷತ್ರಿಯ ರಾಜ ವಿಷ್ಣುವರ್ಧನ ಬಯಸುತ್ತಾನೆ. ಆದರೆ ವಾಸವಿ ಅವನಿಗೆ ಒಲಿಯದೆ ಶಿವನಿಗೆ ಒಲಿದು ಅಗ್ನಿಪ್ರವೇಶ ಮಾಡಿ ತನ್ನ ಕುಲಕ್ಕೆ ಒಳಿತಾಗಲೆಂದು ಹರಸುತ್ತಾಳೆ ಮತ್ತು ಇನ್ನು ಮುಂದೆ ತನ್ನ ಕುಲದ ಕನ್ಯೆಯರು ಕಪ್ಪಾಗಿಯೂ, ಕುರೂಪಿಯರಾಗಿಯೂ ಜನಿಸುವಂತೆ ಬೇಡಿಕೊಳ್ಳುತ್ತಾಳೆ.

ಕಾಶ್ಮೀರದ ಜಮ್ಮುವಿನ ತ್ರಿಕೂಟ ಪರ್ವತದಲ್ಲಿರುವ ವೈಷ್ಣೋದೇವಿ ಗುಹಾಮಂದಿರ ಭಾರತೀಯರಿಗೆ ಅತ್ಯಂತ ಪವಿತ್ರವಾದುದು. ಅವಳು ಆದಕುಮಾರಿ (ಆಜನ್ಮ ಕುಮಾರಿ) ತನ್ನನ್ನು ಅಟ್ಟಿಸಿಕೊಂಡು ಬಂದ ರಾಕ್ಷಸನನ್ನು ಕೊಂದು ವಿಶ್ರಾಂತಿಗಾಗಿ ಮೇಲಿನ ಗುಹೆ ಸೇರಿದ ಈ ಕನ್ಯೆ ಅಲ್ಲಿಯೇ ತಪೋನಿರತಳಾದಳೆಂದು ಐತಿಹ್ಯವಿದೆ. ಸುಂದರವಾದ ಪ್ರಕೃತಿಯ ತಾಣದಲ್ಲಿರುವ ಈ ಗುಹೆಯಲ್ಲಿ ಶಕ್ತಿದೇವತೆಯು ಮಹಾಕಾಳಿ, ಮಹಾಲಕ್ಷ್ಮಿ, ಮಹಾಸರಸ್ವತಿ- ಈ ಮೂರೂ ಅಂಶಗಳಿಂದ ಕೂಡಿದ ಪಿಂಡಿಯ ರೂಪದಲ್ಲಿ ನೆಲೆಸಿದ್ದಾಳೆ. 'ಸಂತೋಷಿಮಾ' ಉತ್ತರ ಭಾರತದವರಿಗೆ ಅತ್ಯಂತ ಜನಪ್ರಿಯಳಾದ ದೇವತೆ ಹದಿನಾರು ಶುಕ್ರವಾರಗಳ ಕಠಿನ ವ್ರತಾಚರಣೆಯಿಂದ ಸುಮಂಗಲಿಯರು ಈ ದೇವತೆಯನ್ನು ಒಲಿಸಿಕೊಳ್ಳುವರೆಂಬ ಪ್ರತೀತಿ ಇದೆ. ಹೀಗೆ ಭಾರತದ ಉದ್ದ-ಅಗಲಗಳನ್ನೂ ವ್ಯಾಪಿಸಿ ನಿಂತಿರುವ ಈ ಶಕ್ತಿದೇವತೆ ಭಾರತೀಯರಿಗೆ ಪೂಜನೀಯಳಾಗಿದ್ದಾಳೆ.

ಕನ್ನಿಕಾದೇವಿಯ ಅಂಶವನ್ನು ಮಾನವರಿಗೆ ಆರೋಪಿಸಿ ಅವರನ್ನು ದೇವಿಯೆಂದು ಪೂಜಿಸುವ ಪದ್ಧತಿಯೂ ರೂಢಿಯಲ್ಲಿದೆ ಜೀವಂತ ದೇವತೆ (Living Goddess) ಯೆಂದು ಕನ್ಯೆಯರನ್ನು ಪೂಜಿಸಿ, ಅವಳ ದರ್ಶನಕ್ಕಾಗಿ ಹಾತೊರೆಯುವ ದೃಶ್ಯವನ್ನು ನೇಪಾಳದಲ್ಲಿ ಕಾಣಬಹುದು. ನೇಪಾಳಕ್ಕೆ ಹೋಗುವ ಪ್ರವಾಸಿಗರಿಗೆ ಇದೊಂದು ಆಕರ್ಷಣೆಯ ಕೇಂದ್ರವಾಗಿದೆ ಷೋಡಶಿ ಪೂಜೆ, ಸುಮಂಗಲಿಯರ ಪೂಜೆಯನ್ನು ಗುರುಪೀಠದವರು ನವರಾತ್ರಿಯಲ್ಲಿ ನೆರವೇರಿಸುತ್ತಾರೆ ನವರಾತ್ರಿಯ ಒಂಭತ್ತು ದಿನಗಳೂ ಬೇರೆ ಬೇರೆ ವಯಸ್ಸಿನ ಕನ್ಯೆಯರನ್ನು ಪೂಜಿಸುವ ಪದ್ಧತಿ ಇದೆ.

ಈ ದೇವೀ ಪೂಜೆಯ ಉಗಮ, ವಿಕಾಸವನ್ನು ನಾವು ಗಮನಿಸುತ್ತಾ ನಮ್ಮ ದೃಷ್ಟಿಯನ್ನು ಹಿಂದಕ್ಕೆ ಹರಿಸಿದರೆ, ಸ್ತ್ರೀ ದೇವತೆಯ ಉಪಾಸನೆಯು ಸಾಮಾಜಿಕ-ಧಾರ್ಮಿಕ-ತಾತ್ತ್ವಿಕ ದೃಷ್ಟಿಗಳಿಂದಲೂ ಗಣನೀಯವಾದ ಸ್ಥಾನ ಗಳಿಸಿರುವುದು ಗೋಚರವಾಗುತ್ತದೆ ಸ್ತ್ರೀ ದೇವತೆಗಳ ಆರಾಧನೆಯು ಕೃಷಿ ಪದ್ಧತಿಯ ಉಗಮದೊಂದಿಗೆ ಸಂಬಂಧಿಸಿದಂತೆ ತೋರುತ್ತದೆ. ಮೂಲ ಬುಡಕಟ್ಟಿನವರ ಗುಂಪು ಜೀವನದಲ್ಲಿ ಸ್ತ್ರೀಯರಿಗಿದ್ದ ಸ್ಥಾನ-ಮಾನ, ಗೌರವವನ್ನು, ಇದು ಸೂಚಿಸುತ್ತದೆ. ಅಲ್ಲಿ ಮಾತೃಪ್ರಧಾನ ಸಮಾಜಕ್ಕೆ ಮನ್ನಣೆಯಿತ್ತು ಈಜಿಪ್ಟ್, ಸಿರಿಯಾ, ಏಷ್ಯಾ ಮೈನರ್ - ಗಳಲ್ಲೂ ಮಾತೃಪ್ರಧಾನ ಸಮಾಜಕ್ಕೆ (Matriarchal Society) ಪ್ರಾಶಸ್ತ್ಯ ಕೊಡುತ್ತಿದ್ದುದನ್ನು ಮಾನವ ಶಾಸ್ತ್ರಜ್ಞರು ಗುರುತಿಸಿದ್ದಾರೆ. ಜನರು ಸುಖ-ಶಾಂತಿ, ರಕ್ಷಣೆಗಳನ್ನು ಪಡೆಯಲು, ಸಂಪತ್ತು, ಬೆಳೆಗಳನ್ನು ವೃದ್ಧಿಸಿಕೊಳ್ಳಲು ಸ್ತ್ರೀ ದೇವತೆಗಳ ಉಪಾಸನೆಗೆ ತೊಡಗಿದರು. ಫಲವತ್ತು, ಸಂಪತ್ತು ಇವು ಸ್ತ್ರೀ ದೇವತೆಯ ಸಂಕೇತಗಳಾದುವು ದುರ್ಗಾ, ಕಾಳಿ, ಸರಸ್ವತಿ, ಲಕ್ಷ್ಮಿ, ಆದಿಶಕ್ತಿ-ಮೊದಲಾದ ದೇವತೆಗಳು ಸಂಪತ್ತು, ಸಮೃದ್ಧಿ, ಜ್ಞಾನ, ಶೌರ್ಯ, ಪರಾಶಕ್ತಿ-ಗಳನ್ನು ಪ್ರತಿನಿಧಿಸಲು ತೊಡಗಿದರು

ಬೇಸಾಯ, ಭೂ ಸಂಪತ್ತು, ಫಲಸಮೃದ್ಧಿ - ಇವುಗಳೊಂದಿಗೆ ಸ್ತ್ರೀ ದೇವತೆಯ ಸಂಬಂಧವು ಸಿಂಧೂ ನಾಗರಿಕತೆಗೆ ಪೂರ್ವದಿಂದಲೂ ಇತ್ತು ಎಂಬುದನ್ನು ಇತಿಹಾಸಕಾರರು ಗುರುತಿಸುತ್ತಾರೆ. ಅನ್ನದಾ, ಅನ್ನಪೂರ್ಣೇಶ್ವರಿ, ಶಾಕಂಭರಿ- ಈ ಹೆಸರುಗಳು ಸ್ತ್ರೀ ದೇವತೆ ಮತ್ತು ವನಸ್ಪತಿಗಳಿಗಿರುವ ಸಂಬಂಧವನ್ನು ಸೂಚಿಸುತ್ತವೆ ಬನಶಂಕರಿಯು ಕ್ಷಾಮವನ್ನು ಹೋಗಲಾಡಿಸಿದ ದೇವತೆಯೆಂದು ಪೂಜನೀಯಳಾಗಿದ್ದಾಳೆ. ಈ ಸಂಬಂಧವೇ ಶಾಕ್ತರಲ್ಲಿ ಕುಲಮರಗಳನ್ನು ದೇವತೆಯೆಂದು ಪೂಜಿಸುವ ಪದ್ಧತಿಗೆ ಪ್ರಾಮುಖ್ಯ ನೀಡಿತೆನ್ನಬಹುದು. (ಉದಾ – ಅರಳಿ, ಅಶ್ವತ್ಥ, ಕದಂಬ, ಅಶೋಕ, ಶಮಿ, ನಿಂಬ, ಹಲಸು, ಆಲ, ಬೇವು, ಬಿಲ್ವ, ಮಾವು) - ಮೊದಲಾದುವುಗಳನ್ನು ಪೂಜಿಸುವ ಪದ್ಧತಿ ರೂಢಿಯಲ್ಲಿದೆ. ಕುಲಯೋಗಿನಿಗಳು ಕುಲಮರಗಳಲ್ಲಿ ವಾಸಿಸುತ್ತಾರೆಂಬ ನಂಬಿಕೆ ಇವರಲ್ಲಿ ಉಂಟಾಯಿತು. ಈಗಲೂ ಬಂಗಾಳದಲ್ಲಿ ದುರ್ಗಾ ಪೂಜೆಯ ಹಿಂದಿನ ದಿನ ಮರದ ಕೆಳಗೆ ದೇವಿಯನ್ನು ಆವಾಹನೆ ಮಾಡುವ 'ಬೋಧನಾ' ಎಂಬ ವಿಧಿಯನ್ನು ಬಂಗಾಳಿಗಳು ಆಚರಿಸುತ್ತಾರೆ. 'ಶತ್ರು ಸಂಹಾರ ಮಾಡಿದ ನೀನು ದೇವಿ ಸ್ವರೂಪದಲ್ಲಿ ಈ ಮರದಲ್ಲಿ ಪ್ರತ್ಯಕ್ಷಳಾಗು' ಎಂಬ ಅರ್ಥ ಬರುವ ಮಂತ್ರಗಳನ್ನು ಈ ಸಮಯದಲ್ಲಿ ಪಠಿಸುತ್ತಾರೆ

ಗುಜರಾತಿನಲ್ಲಿ ಈ ಪೂಜೆಯ ವಿಧಾನ ಬೇರೆಯಾಗಿದೆ. 'ಗರ್ಭಾ' ಎಂಬ ವಿಧಿಯನ್ನು ಸುಮಂಗಲಿಯರು ನವರಾತ್ರಿಯಲ್ಲಿ ಆಚರಿಸುತ್ತಾರೆ ರಂಧ್ರಗಳಿಂದ ಕೂಡಿದ ಮಣ್ಣಿನ ಪಾತ್ರೆಯಲ್ಲಿ ದೀಪವಿರಿಸಿ ಅದರ ಸುತ್ತಲೂ ಸುಮಂಗಲಿಯರು ಹಾಡುತ್ತಾ, ಕುಣಿಯುತ್ತಾರೆ ಕತ್ತಲನ್ನು ಕಳೆದ ಬೆಳಕನ್ನು ಸೂಚಿಸುವ ಹೊಸವರ್ಷದ ಆಗಮನವನ್ನು ಸಾರುವ ಸೂರ್ಯನನ್ನು ಈ ಬೆಳಕು ಪ್ರತಿನಿಧಿಸುತ್ತದೆ. ಅಜ್ಞಾನ ಮೂಢ ನಂಬಿಕೆಯೆಂಬ ಕತ್ತಲನ್ನು ಕಳೆದು ಸುಜ್ಞಾನದ ಪ್ರಭೆಯನ್ನು ಉಂಟು ಮಾಡುವ ಪ್ರತೀಕವಾಗಿದೆ-ಈ ವಿಧಿ

ಈ ಎಲ್ಲಾ ವಿಧದ ಪೂಜೆಯ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳ ಕಾಣಬಹುದೆಂದು ತೋರುತ್ತದೆ ಪ್ರಕೃತಿಯ ವಿಕೋಪಕ್ಕೆ ತಾನೆಲ್ಲಿ ಒಳಗಾಗುವೆನೋ, ತನಗೆಲ್ಲಿ ಕೇಡಾದೀತೋ ಎಂಬ ಭಯವೇ ಮೂಲಮಾನವನನ್ನು ಪ್ರಕೃತಿಯ ಆರಾಧನೆಗೆ, ತದನಂತರ ದೇವತಾರಾಧನೆಗೆ ಪ್ರಚೋದಿಸಿತೆಂಬುದನ್ನು ಮಾನವ ಚರಿತ್ರೆಯು ತಿಳಿಸುತ್ತದೆ

(ಮುಂದುವರೆಯುವುದು)

# ಕವಿಸಾರ್ವಭೌಮ ಕುಮಾರವ್ಯಾಸ

ಶ್ರೀ ಕವಿತಾಕೃಷ್ಣ

ಕನ್ನಡ ಸಾಹಿತ್ಯಲೋಕದಲ್ಲಿ ಆದಿಕವಿ ನಾಡೋಜ ಪಂಪನ 'ವಿಕ್ರಮಾರ್ಜುನವಿಜಯ'ವೇ ಮೊದಲ ಮಹಾಕಾವ್ಯ. ಇದರ ಕಾಲ ಕ್ರಿ. ಶ. ಹತ್ತನೆಯ ಶತಮಾನ. ಅರಿಕೇಸರಿಯಂತಹ ರಾಜನ ಆಶ್ರಯದಲ್ಲಿ ಮೂಡಿಬಂದ ಈ ಮಹಾಕಾವ್ಯ ವಿದ್ವತ್ ಸಭಾವಲಯದಲ್ಲಿ ದೊಡ್ಡ ಮನ್ನಣೆ ಗಳಿಸಿತಲ್ಲದೆ. ಕನ್ನಡ ನಾಡು – ನುಡಿಗೆ ಕೀರ್ತಿಯನ್ನೂ ತಂದಿತ್ತಿತು. ಇದು ರಚನೆಗೊಂಡ ಕೆಲವು ಶತಮಾನಗಳ ನಂತರ ಭುವನದ ಭಾಗ್ಯದಿಂದ ಮರುಹುಟ್ಟು ಪಡೆಯಿತೋ ಎಂಬಂತೆ ರಚನೆಗೊಂಡ ಮತ್ತೊಂದು ಮಹಾಕಾವ್ಯವೇ ಕರ್ಣಾಟಕಭಾರತ ಕಥಾಮಂಜರಿ. ಇದಕ್ಕೆ 'ಗದುಗಿನ ಭಾರತ' ಎಂಬ ಹೆಸರೂ ಕೂಡ ಪ್ರಚಲಿತದಲ್ಲಿದೆ. ಇದನ್ನು ರಚಿಸಿದ ಮಹಾಕವಿಯೇ ಕುಮಾರವ್ಯಾಸ ಆತನಿಗೆ ಗದುಗಿನ ನಾರಣಪ್ಪ ಎಂಬ ನಾಮಧೇಯ ಕೂಡ ಉಂಟು. ಈತ ಮಹಾನ್ ಪ್ರತಿಭಾಶಾಲಿ. ಕಾವ್ಯ ಶಾಸ್ತ್ರಗಳೆರಡರಲ್ಲಿಯೂ ಅದ್ವಿತೀಯ ಪಂಡಿತ. ಮಹಾಕವಿ ವ್ಯಾಸರ ಸಂಸ್ಕೃತ ಭಾರತವನ್ನು ಆಧರಿಸಿ ಈ ಮಹಾಕಾವ್ಯವನ್ನು ಭಾಮಿನೀಷಟ್ಪದಿಯಲ್ಲಿ ರಚಿಸಿದ್ದಾನೆ. ಪಂಡಿತಪಾಮರರಿಬ್ಬರನ್ನೂ ಸೂರೆಗೊಂಡಿರುವುದು ಈ ಕಾವ್ಯದ ವೈಶಿಷ್ಟ್ಯ. ಗದುಗಿನ ಭಾರತ ಕೇಳದ, ಓದದ ಕನ್ನಡಿಗರೇ ಇಲ್ಲವೆಂದರೆ ಅತಿಶಯೋಕ್ತಿಯಾಗದು.

ಕುಮಾರವ್ಯಾಸನ ನಿಜನಾಮಧೇಯ ನಾರಣಪ್ಪ. ಈತನು ಗದುಗಿನ ಶ್ರೀ ವೀರನಾರಾಯಣನ ಭಕ್ತನಾಪುದರಿಂದ ಗದುಗಿನ ನಾರಣಪ್ಪನೆಂದೇ ಪ್ರಸಿದ್ಧಿ. ಈತನ ಹುಟ್ಟೂರು ಗದುಗಿನ ಸಮೀಪದಲ್ಲಿರುವ ಕೋಳಿವಾಡ: ಅದು ಹಿಂದೆ ಅಗ್ರಹಾರವಾಗಿದ್ದಂತೆ ತಿಳಿದು ಬರುತ್ತದೆ. ಈತನು ಜಾತಿಯಲ್ಲಿ ಬ್ರಾಹ್ಮಣನಾದರೂ ಗೌಡ ಮನೆತನದವನಾದ ಕಾರಣ ವೀರನಾರಾಯಣ ಗೌಡ ಎಂಬ ಮತ್ತೊಂದು ಹೆಸರೂ ಕೂಡ ಉಂಟು. ಇಲ್ಲಿ 'ಗೌಡ' ಶಬ್ದವು ಜಾತಿವಾಚಕ ಅಲ್ಲ; ಅದು ವೃತ್ತಿವಾಚಕ ಎಂಬುದು ಗಮನಾರ್ಹ. ಅದರ ಮೂಲರೂಪ 'ಗಾವುಂಡ' ಅಂದರೆ ಗ್ರಾಮದ ಒಡೆಯ ಎಂದರ್ಥ. ಗಾವುಂಡ–ಗೌಂಡ–ಗೌಡ ಆದಂತೆ ತಿಳಿದು ಬರುವುದು. ಈತನ ಪೂರ್ವಜನಾದ 'ಚಿನ್ನದ ಕೈ ಮಾಧವರಸ' ಎಂಬುವನೋರ್ವನು ದಂಡನಾಯಕನಾಗಿದ್ದಂತೆ ತಿಳಿದು ಬರುವುದು ಆತನ ವಂಶಜ ಲಕ್ಕರಸ. ಈತನೇ ಕುಮಾರವ್ಯಾಸನ ತಂದೆ. ಇವನ ಪೂರ್ವಜರ ಹೆಸರಿನಲ್ಲಿ 'ಅರಸ' ಎಂಬ ಪದವಿರುವುದು ಗಮನಾರ್ಹ ಸಂಗತಿ.

ಕುಮಾರವ್ಯಾಸನ ಕಾಲದ ಬಗ್ಗೆ ಇದಮಿತ್ಥಂ ಎಂದು ಹೇಳಲು ಬಾರದು. 13ನೆಯ ಶತಮಾನದಿಂದ 16ನೆಯ ಶತಮಾನದವರೆವಿಗೂ ಎಳೆದೊಯ್ಯುವರು ಗೋವಿಂದಪೈ ಕ್ರಿ. ಶ. 1230–35 ಎಂದರೆ, ಆರ್ ನರಸಿಂಹಾಚಾರ್ಯರು 1430 ಎಂದು, ಕೆಲವರು 1530 ಎಂದು ಹೇಳಿದ್ದಾರೆ ಶ್ರೀಕೃಷ್ಣದೇವರಾಯನ ಕಾಲದ ಭಕ್ತಿಪಂಥವಾದ ಹರಿದಾಸ ಸಾಹಿತ್ಯದ ಪ್ರೇರಣೆಯಿಂದಲೇ ಕುಮಾರವ್ಯಾಸನು ಭಕ್ತಕವಿಯಾದ ಎಂದು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. ಈಗ ಕೋಳಿವಾಡದಲ್ಲಿರುವ ಅವನ ವಂಶಸ್ಥರಾದ 14ನೆಯ ತಲೆಯ ಶ್ರೀ ಜೋಷಿ ಅವರನ್ನು ಕೇಳಿದರೆ ಆಧಾರವೊಂದನ್ನು ಪುರಾವೆಯಾಗಿರಿಸಿ ಆತನ ಕಾಲ ಕ್ರಿ ಶ. 1242 ಎಂದು ಹೇಳುತ್ತಾರೆ. ಅವರು ಹೇಳುವ ಪ್ರಕಾರ ಕುಮಾರವ್ಯಾಸ ಗದುಗಿನೊಡೆಯನ ವರಪ್ರಸಾದದಿಂದಲೇ ಜನಿಸಿದವನು. ಕೋಳಿವಾಡದ ಲಕ್ಕರಸನಿಗೆ ಸಂತಾನವಿಲ್ಲದಿರಲು ಗದುಗಿನ ವೀರನಾರಾಯಣನ ಮೊರೆಹೊಕ್ಕನು. ಕ್ರಮೇಣ, ಆತನಿಗೆ 5 ಮಂದಿ ಪುತ್ರರು ಜನಿಸಿದರು. ಅವರಲ್ಲಿ ಮೊದಲನೆಯ ನಾರಾಯಣಪ್ಪನೇ ನಮ್ಮ ಕುಮಾರವ್ಯಾಸ ಈತ ಶಸ್ತ್ರಾಸ್ತ್ರ ಪ್ರವೀಣನಾಗಿದ್ದಂತೆ ಮಹಾಪಂಡಿತನೂ ಆಗಿದ್ದನಂತೆ. ಈತನಿಗೆ "ಶ್ರೀ ಶಕೆ 1134 ನೇ ಅಂಗಿರಸ ಸಂವತ್ಸರ ಅಧಿಕ ಆಷಾಢ ಬಹುಳ ದ್ವಾದಶಿ ಶನಿವಾರ ರೋಹಿಣಿ ನಕ್ಷತ್ರದ ಅಮೃತಸಿದ್ಧಿ ಯೋಗದಲ್ಲಿ" ತಂದೆಯಿಂದ ಪಾಲು ದೊರೆಯಿತಂತೆ. ಈ ಆಧಾರದ ಮೇರೆಗೆ ಆತನ ಕಾಲ ಕ್ರಿ ಶ 1242ಕ್ಕೆ ಸರಿಹೊಂದುತ್ತದೆ. ಆದಾಗ್ಯೂ ಮಹಾಕವಿಯ ಜನನದ ಬಗ್ಗೆ ಮತ್ತಷ್ಟು ಸಂಶೋಧನೆ ನಡೆಯಬೇಕಾಗಿದೆ.

ಕುಮಾರವ್ಯಾಸ ಮಹಾಕವಿ ಎಂಬ ಮಾತನ್ನು ಆತನ ಮಹಾಕಾವ್ಯವಾದ ಕರ್ಣಾಟಕ ಭಾರತ ಕಥಾಮಂಜರಿಯು ಪುಷ್ಟೀಕರಿಸುತ್ತದೆ. ನವರಸಗಳ ಮಡುವಾದ ಆ ಮಹಾಕಾವ್ಯದಲ್ಲಿ ನಮ್ಮ ಸಂಸ್ಕೃತಿಯು ಅಡಕವಾಗಿದೆ ಆತನ ಶಬ್ದಸಂಪತ್ತು ಎಂತಹ ಪಂಡಿತರನ್ನೂ ಸೋಜಿಗಗೊಳಿಸುತ್ತದೆ: ಅವನು ಶಕ್ತಕವಿ ಮಾತ್ರ ಅಲ್ಲ; ಭಕ್ತಕವಿಯೂ ಹೌದು! ಶ್ರೀಕೃಷ್ಣ ಭಗವಾನನ ಬಗ್ಗೆ ಮಿಗಿಲಾದ ಪ್ರೀತಿ, ಭಕ್ತಿ, ಗೌರವ. "ನೆಲೆಗೆ ಪಂಚಮಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ" ಎಂಬ ಸಂಕಲ್ಪ ಮಾಡಿಯೇ ಕಾವ್ಯರಚನೆಗೆ ತೊಡಗಿದ್ದಾನೆ. ಕೃಷ್ಣನ ವರ್ಣನೆಯ ಸುಂದರ ಚಿತ್ರವನ್ನು ಕವಿ ನಮ್ಮ ಕಣ್ಣೆದುರಿನಲ್ಲಿ ಚಿತ್ರಿಸುವ ಪರಿ ಅವರ್ಣನೀಯ. ಭಕ್ತಿಯ ನಿರ್ಮಲ ಸಲಿಲದ ಮಹಾಪೂರವೇ ಇಲ್ಲಿ ಹರಿದಿದೆ. ಮಹಾಕವಿ ವ್ಯಾಸರ 18 ಪರ್ವಗಳ ಪೈಕಿ ಈತ 10 ಪರ್ವಗಳನ್ನು ಮಾತ್ರ ಬರೆದಿದ್ದಾನೆ ಉಳಿದ 8 ಪರ್ವಗಳನ್ನು ವಿಜಯನಗರದ ಶ್ರೀಕೃಷ್ಣದೇವರಾಯನ ಕಾಲದಲ್ಲಿ ಆಸ್ಥಾನಕವಿಯಾಗಿದ್ದ ಭಾನುಭಟ್ಟನ ಮಗ ತಿಮ್ಮಣ್ಣ ಕವಿ ಬರೆದು ಪೂರೈಸಿದ್ದಾನೆ.

ಕುಮಾರವ್ಯಾಸನು ವಿಶಿಷ್ಟ ಶಕ್ತಿಯ ಸ್ವತಂತ್ರ ಕವಿ. ಅವನ ಪ್ರತಿಭಾಶಕ್ತಿ ಅಸಾಧಾರಣವಾದದ್ದು ಮಹಾಕವಿ ಪಂಪನಿಗೆ ಭಾರತವು ಲೌಕಿಕ ಕಾವ್ಯವಾದರೆ ನಮ್ಮ ಕುಮಾರವ್ಯಾಸನಿಗೆ ಭಗವದ್ವಿಲಾಸವಾಯಿತು. ಭಾಮಿನೀಷಟ್ಪದಿಯಲ್ಲಿ ಕಾವ್ಯವನ್ನು ಭವ್ಯವಾಗಿ ಬರೆದಿದ್ದಾನೆ ಅವನು ರೂಪಕ ಚಕ್ರವರ್ತಿ. ಅಲಂಕಾರಾದಿ ಉಕ್ತಿವೈಚಿತ್ರ್ಯಗಳೊಂದಿಗೆ ನಾಟ್ಯವಾಡಿದ್ದಾನೆ. ಪಾತ್ರಪೋಷಣೆಯಲ್ಲಿ ಅತಿ ಚತುರತೆ ತೋರಿದ್ದಾನೆ. ಯುದ್ಧವರ್ಣನೆಯಲ್ಲಿ ಕರುಳು ಬಾಯ್ಗೆ ಬರುವಂತೆ ಚಿತ್ರಿಸಿದ್ದಾನೆ. ನಾಸ್ತಿಕರನ್ನು ಆಸ್ತಿಕರನ್ನಾಗಿಸುವ ಅವನ ಭಕ್ತಿಯ ಪವಾಡಕ್ಕೆ ಒಳಗಾಗದವರು ಇಲ್ಲವೆನ್ನಬೇಕು ಕುಮಾರವ್ಯಾಸನ ಅರ್ಜುನ, ಕೃಷ್ಣ, ಕರ್ಣ, ಅಭಿಮನ್ಯು, ವಿದುರ, ಭೀಷ್ಮ, ದ್ರೋಣ, ಧರ್ಮರಾಯ, ಭೀಮಾದಿಗಳು ಕನ್ನಡ ಸಾಹಿತ್ಯಲೋಕದ ಚಿರಂಜೀವಿಗಳು. ಜಟಿಲಾತಿ ಜಟಿಲವಾದ ಕತೆಯೊಂದನ್ನು ಕನ್ನಡದಲ್ಲಿ ಕಲಾತ್ಮಕವಾಗಿ ಹೇಳಿ ಪಂಡಿತ ಪಾಮರರಿಬ್ಬರನ್ನು ಆನಂದ ಪಡಿಸಿದ ಕೀರ್ತಿ ಕುಮಾರವ್ಯಾಸನದು. ಈತನ ಕಾವ್ಯವನ್ನು ಸರಿಗಟ್ಟುವ ಮತ್ತೊಂದು ಕಾವ್ಯ ಇಲ್ಲ ಎಂದರೆ ಅತಿಶಯೋಕ್ತಿಯಾಗದು. ಇದು ಬೃಹತ್ತಿನಲ್ಲಿ ಮಾತ್ರ ಅಲ್ಲ ಮಹತ್ತಿನಲ್ಲೂ ಹಿರಿಯ ಕಾವ್ಯವಾಗಿದೆ. ಆತನೇ ಹೇಳಿದಂತೆ ಅವನ ಕಾವ್ಯವು 'ಅರಸುಗಳಿಗೆ ವೀರ, ದ್ವಿಜರಿಗೆ ಪರಮವೇದದ ಸಾರ, ಯೋಗೀಶ್ವರರ ತತ್ತ್ವವಿಚಾರ, ಮಂತ್ರಿಜನಕ್ಕೆ ಬುದ್ಧಿ ಗುಣ, ವಿರಹಿಗಳ ಶೃಂಗಾರ, ವಿದ್ಯಾಪತಿಗಳಲಂಕಾರ'ವಾಗಿದೆ. ಆತ ಗದುಗಿನೊಡೆಯಲ್ಲಿ ಬೇಡಿದ್ದು: 'ಕಾವುದಾನತ ಜನವ' ಎಂದು, ಬೆನಕನಲ್ಲಿ ಬೇಡಿದ್ದು: 'ತ್ರಿಜಗ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ' ಎಂದು, ಸರಸ್ವತಿಯಲ್ಲಿ ಬೇಡಿದ್ದು: 'ಶಾರದೆಯೆ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ' ಎಂದು. ಕವಿಯ ಆಶಯ, ಅವನ ಹೃದಯ ವೈಶಾಲ್ಯ ಎಂತದ್ದು! ಅವನ ಮಹಾಕಾವ್ಯ ಮತಿಗೆ ಮಂಗಳ ವನ್ನು ಉಂಟುಮಾಡುವಂತದ್ದೇ ಆಗಿದೆ

ಈತ ಪ್ರತಿನಿತ್ಯ ಕೊಳದಲ್ಲಿ ಮಿಂದು, ಒದ್ದೆ ಒಟ್ಟೆಯಲ್ಲಿಯೇ ಗದುಗಿನ ವೀರನಾರಾಯಣನ ಸನ್ನಿಧಿಯಲ್ಲಿ ಕುಳಿತು ಮಹಾಭಾರತವನ್ನು ಬರೆದು ಮುಗಿಸಿದನಂತೆ. ಆದರೆ ಅವನು ತನ್ನ ಬಟ್ಟೆಯ ತೇವ ಆರುವವರೆಗೆ ಮಾತ್ರ ಕುಳಿತು ಬರೆಯುತ್ತಿದ್ದನಂತೆ ಇಂತಹ ದಂತ ಕತೆಯೊಂದು ಪ್ರಚಲಿತದಲ್ಲಿದೆ. ಏನೇ ಆಗಲಿ ನಿರ್ಮಲಚಿತ್ತನಾಗಿ ಕುಳಿತು ಕಾವ್ಯವನ್ನು ಸಾವಧಾನದಿಂದ ಬರೆದು ಮುಗಿಸಿದ ಎಂಬುದೆ ಈ ಕತೆಯ ಸಾರಾಂಶ. ಕವಿಗೆ ಎಲ್ಲೂ 'ಅಹಂ' ತಲೆದೋರಿಲ್ಲ ತಾನು ಬರೆಯುವ ಮಹಾಕೃತಿಗೆ 'ವೀರನಾರಾಯಣನೆ ಕವಿ, ಲಿಪಿಕಾರ ಕುಮಾರವ್ಯಾಸ'ನಂತೆ! ಹಾಗೆಂದು ಕೃತಿಯಾರಂಭದಲ್ಲಿ ತಾನೇ ಹೇಳಿಕೊಂಡಿದ್ದಾನೆ.

ಕುಮಾರವ್ಯಾಸನ ಹುಟ್ಟೂರಾದ ಕೋಳಿವಾಡದಲ್ಲಿ 'ಶ್ರೀ ಕುಮಾರವ್ಯಾಸ ಸ್ಮಾರಕ ವಿಶ್ವಸ್ಥ ಮಂಡಲಿ'ಯೊಂದು ರೂಪುಗೊಂಡಿದೆ. ಕವಿಯ ಹುಟ್ಟೂರಿನಲ್ಲಿರುವ ಮಾಧವ ಜನಾರ್ಧನ ಎಂದು ಕರೆಸಲ್ಪಡುವ ವೀರನಾರಾಯಣನ ಗುಡಿಯ ಜೀರ್ಣೋದ್ಧಾರ ಕಾರ್ಯವನ್ನೂ, ಶ್ರೀ ಕುಮಾರ ವ್ಯಾಸಕವಿಯ ಸ್ಮಾರಕ ಸಭಾಗೃಹವೊಂದನ್ನು ನಿರ್ಮಿಸುವ ತಯಾರಿಯಲ್ಲಿದೆ. ಮಹಾಕವಿಯ ಬಗ್ಗೆ ಬೆಳಕು ಚೆಲ್ಲುವ 'ಕವಿಸಾರ್ವಭೌಮ ಶ್ರೀ ಕುಮಾರವ್ಯಾಸ' ಎಂಬ ಮಾಸಿಕ ಒಂದನ್ನು ಹೊರತರುತ್ತಿದೆ ಗಮಕ ಪ್ರಚಾರಕ್ಕೆ ಟೊಂಕಕಟ್ಟಿ ನಿಂತಿದೆ. ಪ್ರತಿವರ್ಷವೂ ಕುಮಾರವ್ಯಾಸ ಜಯಂತಿಯನ್ನು ಅದ್ಧೂರಿಯಿಂದ ಆಚರಿಸುತ್ತಿದೆ. ಕನ್ನಡ ಕಾವ್ಯ ಸರಸ್ವತಿಯ ಕಂಠಾಭರಣವಾದ ಮಹಾಕವಿ ಕುಮಾರವ್ಯಾಸನ ಜಯಂತಿ ಮನೆಮನೆಯಲ್ಲೂ ಆಚರಿಸುವಂತಾಗಬೇಕು. ಅವನ ಸಂದೇಶ ಮನಮನಗಳಲ್ಲೂ ತುಂಬಿ ಬೆಳಗಬೇಕು.



ಜೀವನ್ಮುಕ್ತ ಅಂದರೆ ಸಜೀವನಾಗಿಯೇ ಮುಕ್ತನಾಗಿರುವವನು ಎಂದರ್ಥ. ಸಾಧಾರಣವಾಗಿ ಮೃತರಾದ ನಂತರವೇ ಕೆಲವರಿಗೆ ಮುಕ್ತಿ ಲಭಿಸುತ್ತದೆ. ಕೆಲವರು ಅಂದರೆ ಜ್ಞಾನವನ್ನು ಸಂಪಾದಿಸಿ ಕೊಂಡಿರುವವರು ಎಂದು ಅರ್ಥ ಹೇಳಿಕೊಳ್ಳಬೇಕು. ಈಗ ಜೀವನ್ಮುಕ್ತರು ಯಾರು? ಜೀವನ್ಮುಕ್ತಿ ಹೇಗೆ ಲಭಿಸುವುದು? ಇಂಥ ಪ್ರಶ್ನೆಗಳನ್ನು ಕುರಿತು ವಿಚಾರಮಾಡೋಣ.

ಮನ ಏವ ಮನುಷ್ಯಾಣಾಂ
ಕಾರಣಂ ಬಂಧ ಮೋಕ್ಷಯೋಃ

(ವಸಿಷ್ಠಗೀತೆ)

ಮನವೆ ಮನುಷ್ಯರ ಬಂಧಕ್ಕೆ ಮೋಕ್ಷಕ್ಕೆ ಮೂಲ ಎಂದರ್ಥ. ಇಂಥ ಮನಸ್ಸನ್ನು ಯಾರು ನಿಗ್ರಹಿಸುತ್ತಾರೋ ಅಂಥವರೆ ಜ್ಞಾನಿಗಳು. ಚಂಚಲವಾದ ಮನಸ್ಸನ್ನು ನಿಗ್ರಹಿಸುವುದು ನಿಜವಾಗಿ ಕಷ್ಟಸಾಧ್ಯವಾದ ಕೆಲಸ. ಆದರೆ ಅಸಾಧ್ಯವಾತ್ರ ಅಲ್ಲ. ಭಗವದ್ಗೀತೆಯಲ್ಲಿ ಪರಮಾತ್ಮನು ಹೇಳಿದ್ದಾನೆ–

ಅಸಂಶಯಂ ಮಹಾಬಾಹೋ
ಮನೋದುರ್ನಿಗ್ರಹಂ ಚಲಮ್ ।
ಅಭ್ಯಾಸೇನ ತು ಕೌಂತೇಯ
ವೈರಾಗ್ಯೇಣ ಚ ಗೃಹ್ಯತೇ ॥

"ಅರ್ಜುನಾ! ಮನಸ್ಸನ್ನು ನಿಗ್ರಹಿಸುವುದು ಖಂಡಿತವಾಗಿ ಕಷ್ಟವಾದ ಕಾರ್ಯವೆ. ಆದರೆ, ಅಭ್ಯಾಸದಿಂದಲೂ, ವೈರಾಗ್ಯದಿಂದಲೂ ಅದನ್ನು ನಿಗ್ರಹಿಸುವುದು ಸುಲಭ" ಮನಸ್ಸನ್ನು ವಿಷಯಗಳಿಂದ ಉಪಸಂಹರಿಸಿ ಅಂತರ್ಮುಖವಾಗಿಟ್ಟುಕೊಂಡು, ನಿರಂತರ ಭಗವಂತನ ಚಿಂತನೆ, ಸ್ಮರಣೆ ಮಾಡಬಹುದು ವಿಷಯಪರಾಙ್ಮುಖವಾದ, ನಿರ್ಮಲ ಚಿತ್ತದ ದರ್ಪಣದಲ್ಲಿ ಭಗವಂತನ ಸ್ವಚ್ಛವಾದ ಮೂರ್ತಿಯನ್ನು ಕಾಣಬಹುದು. ವಸಿಷ್ಠಗೀತೆಯಲ್ಲಿ ಜೀವನ್ಮುಕ್ತನ ಲಕ್ಷಣಗಳು ವರ್ಣಿಸಲ್ಪಟ್ಟಿವೆ.

ಆಪತತ್ಸು ಯಥಾ ಕಾಲಂ
ಯಥಾ ದೇಶಂ ಯಥಾ ಕ್ರಮಮ್ ।
ಸುಖ ದುಃಖೇಷು ನ ಕ್ಷೋಭ
ಮೇತಿ ಭೂಭೃದ್ವೃತುಷ್ವಿವ

ಎಲ್ಲಾ ಋತುಗಳಲ್ಲಿ ಪರ್ವತಗಳು ನಿರ್ವಿಕಾರವಾಗಿರುತ್ತವೆ. (ಮಳೆ ಬಂದರೂ, ಚಳಿ ಇದ್ದರು, ಬಿಸಿಲು ಕಾಲದಲ್ಲಿಯೂ ಗಿರಿಗಳು ಯಾವ ವಿಕಾರಕ್ಕೂ ವಶವಾಗುವುದಿಲ್ಲ) ಅದೇ ರೀತಿ ಆಕಸ್ಮಿಕವಾಗಿ ಬರುವ ಸುಖ ದುಃಖಗಳಿಂದ ಜೀವನ್ಮುಕ್ತರು ಚಲಿತರಾಗುವುದಿಲ್ಲ. ಸುಖ ಬಂದರೆ ಸಂತೋಷಿಸುವುದಿಲ್ಲ, ದುಃಖ ಬಂದರೆ ಅಳುವುದಿಲ್ಲ. ಸರ್ವದಾ ನಿರ್ವಿಕಾರವಾಗಿ ನಿಶ್ಚಲವಾಗಿರುತ್ತಾರೆ.

ಸಾಧಾರಣವಾಗಿ ಮುಕ್ತಿಯೆಂದರೆ ಮರಣಾನಂತರ ಸ್ವರ್ಗದಲ್ಲಿ ಲಭಿಸುವ ಒಂದಾನೊಂದು ಸೌಖ್ಯ–ಎಂದು ನಾವು ಭಾವಿಸುತ್ತೇವೆ. ಆದರೆ ಇದು ಸರಿಯಲ್ಲ.

ನ ಮೋಕ್ಷೋ ನಭಸಃ ಪೃಷ್ಠೇ
ನ ಪಾತಾಳೇ ನ ಭೂತಲೇ ।
ಮೋಕ್ಷೋ ಹಿ ಚೇತೋ ವಿಮಲಮ್

# ಜೀವನ್ಮುಕ್ತ

ಸಮ್ಯಕ್‌ಜ್ಞಾನ ವಿಬೋಧಿತಮ್ ॥

ಮೋಕ್ಷವು ಆಕಾಶದಲ್ಲಿ ಅಥವಾ ಪಾತಾಳದಲ್ಲಿ, ಅಥವಾ ಭೂಲೋಕದಲ್ಲಿ ಇಲ್ಲ. ಜ್ಞಾನದಿಂದ ಬರುವ ಮನಸ್ಸಿನ ನಿಶ್ಚಲತೆಯನ್ನು 'ಮೋಕ್ಷ' ಎಂದು ಪಂಡಿತರು ಹೇಳಿದ್ದಾರೆ.

ಸಕಲಾಶಾ ಸ್ವಸಂಸಕ್ತಾ ತ
ಯತ್ ಸ್ವಯಂ ಚೇತಸಃ ಕ್ಷಯಃ ।
ಸ ಮೋಕ್ಷನಾಮ್ನಾ ಕಥಿತಃ
ತತ್ತ್ವಜ್ಞೈರಾತ್ಮದರ್ಶಿಭಿಃ ॥

ಸಮಸ್ತ ಆಶೆಗಳನ್ನು ಬಿಡುವುದರಿಂದ ಮನಸ್ಸು ನಾಶವಾಗುತ್ತದೆ. ಅಂಥ ಚಿತ್ತದ ನಾಶ ಅಥವಾ ಕ್ಷಯವೇ ಮೋಕ್ಷ, ಸಂಕಲ್ಪ ವಿಕಲ್ಪಾತ್ಮಕವಾದ ಮನಸ್ಸು ನಿರಂತರವು ಸ್ವಾಭಾವಿಕವಾಗಿಯೇ ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತವಾಗುತ್ತದೆ. ಮನಸ್ಸಿನ ಇಂಥ ಸ್ಥಿತಿ ಬಂಧವನ್ನೇ ಕೊಡುತ್ತದೆ. ಮೋಕ್ಷ ಅಂದರೆ ಮೋಹದ ಕ್ಷಯವೆಂದು ಹೇಳಬಹುದು. ಮೋಹವನ್ನು ಯಾರು ನಾಶಮಾಡಿ ಕೊಳ್ಳುತ್ತಾರೋ ಅಂಥವರು ಸಂಸಾರದಲ್ಲಿ ಜೀವಿತರಾಗಿದ್ದರೂ ಮುಕ್ತರೇ ಆಗುತ್ತಾರೆ. ಅಂಥ ಜ್ಞಾನಿಗಳನ್ನು ಆಧ್ಯಾತ್ಮಿಕ ಪರಿಭಾಷೆಯಲ್ಲಿ 'ಜೀವನ್ಮುಕ್ತರು' ಎಂದು ಕರೆಯುವುದುಂಟು.

ಜೀವನ್ಮುಕ್ತರು ಸಮಸ್ತಪ್ರಾಣಿಗಳಲ್ಲಿ ಭಗವಂತನನ್ನು ಕಾಣುತ್ತಾರೆ. ಸಾತ್ತ್ವಿಕಗುಣ ಅವರ ಸ್ವಭಾವ. ನಿರಂತರ ಶಾಂತಗುಣ ಅವರಿಗಿರುವ ಒಂದೇ ಒಂದು ಅಮೂಲ್ಯವಾದ ಭೂಷಣ. ಪರರನ್ನು ದೂಷಣೆ ಮಾಡುವುದು, ರಾಗ, ದ್ವೇಷ–ಇಂಥ ದುರ್ಗುಣಗಳಿಗೆ ಅವರ ಹೃದಯದಲ್ಲಿ ಸ್ಥಳವಿಲ್ಲ. ದಾನ, ಧರ್ಮ, ಪರೋಪಕಾರ, ಭಗವಂತನ ಗುಣಗಳ ಕೀರ್ತನ, ಸತ್ಯವನ್ನೇ ಮಾತಾಡುವ ಕಠೋರ ನಿಯಮ, ಅವರ ನೈಸರ್ಗಿಕವಾದ ಲಕ್ಷಣಗಳು. ಜೀವನ್ಮುಕ್ತರು ಸುಖದುಃಖಾದಿ ದ್ವಂದ್ವಗಳನ್ನು ಸಮಾನವಾಗಿಯೆ ನೋಡುತ್ತಾರೆ. ಅಂಥ ಪುಣ್ಯಪುರುಷರ, ಧನ್ಯಜೀವಿಗಳ ಸಂಪರ್ಕದಿಂದ ನಮ್ಮಂಥ ಸಾಮಾನ್ಯರ ಜೀವಿತವೂ ಧನ್ಯವಾಗುವುದು ಸತ್ಯ.

ಜನನಮರಣರೂಪೀ ಸಂಸಾರಚಕ್ರದಿಂದ ಬಿಡುಗಡೆ ಹೊಂದುವುದು ಮಾನವ ಜೀವನದ ಪರಮಾರ್ಥ, ಮುಕ್ತಿಯನ್ನು ಹೊಂದುವುದು ಜ್ಞಾನಿಗಳಿಗೆ ಮಾತ್ರಸಾಧ್ಯ. ಜ್ಞಾನಾದೇವ ತು ಕೈವಲ್ಯಮ್-ಜ್ಞಾನದಿಂದ ಕೈವಲ್ಯ –ಎಂದು ಪ್ರಾಚೀನ ಮುನಿಗಳ ಸೂಕ್ತಿ ಹೇಳುತ್ತದೆ. ಅಂಥ ಜ್ಞಾನ ಸತ್ಪುರುಷರ ಸಾಂಗತ್ಯದಿಂದ, ಒಳ್ಳೆಯ ಗ್ರಂಥ ಅಧ್ಯಯನದಿಂದ ನಮಗೆ ಲಭಿಸುತ್ತದೆ. ಯಾರು ಅಂಥ ಜ್ಞಾನವನ್ನು ಪಡೆಯುವವರೋ, ಅಂಥವರು ಜೀವನ್ಮುಕ್ತರೇ. ಆ ಪರಮೇಶ್ವರನು ನಮಗೆಲ್ಲರಿಗೂ ಅಂಥ ಜ್ಞಾನವನ್ನು, ಜೀವನ್ಮುಕ್ತ ಸ್ಥಿತಿಯನ್ನು ಕೊಡಲಿ, ನಮ್ಮೆಲ್ಲರ ಬಾಳು ಧನ್ಯವಾಗಲಿ!



**ಶ್ರೀ ಕೆ. ಸುಧಾಕರರಾವ್**

(14ನೇ ಪುಟದಿಂದ)

ಯಾವ ದಾನವನನ್ನು ನೇರವಾಗಿ ಯುದ್ಧ ಮಾಡಿ ಜಯಿಸಿದ್ದೀಯ? ಕಾಲಯವನ ಯಾದವರ ಮೇಲೆ ದಂಡೆತ್ತಿ ಬಂದಾಗ, ಸೋಲಿಸಲಾಗದೆ, ಮುಚುಕುಂದನಿಂದ ಅವನನ್ನು ಸುಟ್ಟು ಬೂದಿ ಮಾಡಿಸಿದೆ :

ಕಾಲಯವನನು ಕಲಹಕೊಡಲಿ ಬಂದರೆ ಕೃಷ್ಣ
ಮೂಲೆಯಲಿ ಹೋಗಿ ಅಡಗಿದೆ ಕೋಲೆ
ಮೂಲೆಯಲಿ ಹೋಗಿ ಅಡಗಿದೆ ಮುಚುಕುಂದ
ಕಾಲಯ.ದಲಿ ನಿನ್ನ ಉಳುಹಿದ ಕೋಲೆ

ಹಾಗೆಯೇ ಕಂಸನನ್ನು ಕೊಂದ ದ್ವೇಷಕ್ಕಾಗಿ ಜರಾಸಂಧ ನಿನ್ನಮೇಲೆ ಯುದ್ಧಕ್ಕೆ ಬಂದಾಗ ಭೀಮನಿಂದ ಕೊಲ್ಲಿಸಿದೆ :

ಭೀತಿ ತಾರಿಸೆ ಬರಲು ಧೀರಜರೆಯಸುತಗೆ
ಹೋರಿ ತೋರದೆ ಕಳ್ಳವೇಷದಿ ಕೋಲೆ
ಹೋರಿ ತೋರದೆ ಕಳ್ಳವೇಷದಿ ಬಂದಿರೆ ವೀರ
ಮಾರುತಿ ಜೈಸಿ ಉಳಿಸಿದ

ಹೀಗೆ ಎಲ್ಲರನ್ನೂ ಕಳ್ಳತನದಿಂದ ಗೆದ್ದು, ಲೋಕದಲ್ಲಿ ಮಾತ್ರ ಹೆಸರುವಾಸಿಯಾಗಿದ್ದೀಯ. ತ್ರಿಗುಣಗಳನ್ನು ವಿಾರಿದವನೆಂದು ನಿನ್ನನ್ನು ಜಗತ್ತು ಹೊಗಳುತ್ತದೆ. ನಿನ್ನ ಸದ್ಗುಣಗಳು ಜಗತ್ತಿಗೆ ಗೊತ್ತೇ? ಒಂದೊಂದನ್ನೂ ಎತ್ತಿಹೇಳುತ್ತೇನೆ ಕೇಳು :

ಬೆಣ್ಣೆ ಮೊಸರು ಕದ್ದು ಕನ್ಯೆರೆಲ್ಲರ ಕೆಡಿಸಿ
ಮುನ್ನ ಕೊತ್ತಿನ ಮನೆಯಲ್ಲಿ ಉಂಡು ಹಿಂಡೆ
ಹೆಣಾಗಿದ್ದದ್ದು ಮರೆತೇನೆ ಕೋಲೆ

ತಾಯಿಯನ್ನು ದೇವರ ಸಮನಾಗಿ ಕಂಡವ ನೀನು ಅಲ್ಲವೆ? ಹೆಂಡತಿಯ ಬಗ್ಗೆ ಬಹಳ ದಯೆ ತೋರಿದ್ದೀಯೆ :

ಕೊಡಲಿ ಹಿಡಿದು ಹಡೆದ ಮಾತೆಯ ಕೊಂದು
ಕಡಲ ಬಂಧಿಸಿ ಮಡದಿಯ ಕೋಲೆ
ಕಡಲ ಬಂಧಿಸಿ ಮಡದಿಯ ಕೊಂಡು ಬಂದು
ಅಡವಿಗಟ್ಟಿದ ಮಹಮಹಿಮ ಕೋಲೆ

ಸ್ವರಮಣನೆಂದು ಹೇಳಿಕೊಂಡು, ಕರಡಿಮಗಳನ್ನು ಮದುವೆಯಾದ ನೀನು ಸಾಮಾನ್ಯನಲ್ಲ. ಶಬರಿ ಯೆಂಜಲತಿಂದೆ. ಕುಬ್ಜೆಯನ್ನು ಕೂಡಿದೆ.

ನಿನ್ನ ಸಂಸಾರವೋ ಬಲುಚೆಂದ. ನೆಂಟರಿಷ್ಟರು ಬಹಳ ಒಳ್ಳೆಯವರು. ನಿನ್ನ ಹಿರಿಯ ಮಗ ತಲೆಹೊಡಕ. ಕಿರಿಮಗ ಚಂಚಲ. ಮೊಮ್ಮಗ ನಾರದ ಚಾಡಿಕೋರ, ನಿನ್ನ ಮಗಳು ಮಹಾ ಪತಿವ್ರತೆ ಶಿವನ ಮುಡಿಯೇರಿದಳು ನಿನ್ನ ತಾಯಿಯೊ ಪರರಿಗುಪಕಾರಿ ಮನೆಮಾರಿ. ಹಡೆದ ತರಳರನ್ನೆಲ್ಲ ಎಸೆದಳು. ಸೊಸೆ ಶಾರದೆ ಎಲ್ಲರ ಬಾಯಲ್ಲೂ ಬರುತ್ತಾಳೆ ರುದ್ರನೋ ಬ್ರಹ್ಮಹತ್ಯೆಮಾಡಿದ.

ನಿನ್ನ ಭಕ್ತರಂತೂ ಸತ್ಪುರುಷರು. ಮಾತೃದ್ರೋಹಿ ನಾರದ, ಪಿತೃದ್ರೋಹಿ ಪ್ರಹ್ಲಾದ, ಭ್ರಾತೃದ್ರೋಹಿ ವಿಭೀಷಣ, ಸ್ವಾಮಿದ್ರೋಹಿ ಅಕ್ರೂರ, ಗುರುದ್ರೋಹಿ ಧರ್ಮಜ, ಬ್ರಹ್ಮದ್ರೋಹಿ ಯಾದವರು-ಇಂತಹವರು ನಿನಗೆ ಪ್ರೀತಿ ಪಾತ್ರರು.

ಇಷ್ಟೆಲ್ಲ ನಿಂದೆಮಾತುಗಳನ್ನು ಕೇಳುತ್ತ ಸುಮ್ಮನೆ ಕುಳಿತಿದ್ದ ಕೃಷ್ಣ, ಕಡೆಯಲ್ಲಿ ಅರ್ಜುನನನ್ನು ಕುರಿತು, ಅತ್ತೆಯ ಮಗನೆಂದು ತಂಗಿಯನ್ನು ಕೊಟ್ಟೆ ಅಲ್ಲದೆ ನಿನ್ನ ರಥಕ್ಕೆ ಸಾರಥಿಯಾಗಿ ಉಪಕಾರಮಾಡಿದೆ. ಅದಕ್ಕೆ ಸರಿಯಾದ ಪ್ರತಿಫಲ ನಿನ್ನಿಂದ ಸಿಕ್ಕಿತು ಎಂದು ವ್ಯಂಗ್ಯವಾಡಿದ.

ಈಗ ಅರ್ಜುನನಿಗೆ ತಾನೇಕೆ ಇಷ್ಟೊಂದು ನಿಂದಿಸಿದೆ ಎಂಬ ಬಗ್ಗೆ ಪಶ್ಚಾತ್ತಾಪ ಬಂದು ಪಾಪಭೀತಿ ಮೂಡಿರಬೇಕು. ತಾನಂದಿದ್ದೆಲ್ಲ ನಿಜವೇನೋ ಎಂಬ ಭ್ರಮೆ, ಭಯಗಳಿಂದ ಕೃಷ್ಣನ ಬಳಿ ಬಂದು ಕ್ಷಮೆಕೇಳಲು ತೊಡಗಿದ :

ಗುಣನಿಧಿ ನಿನ್ನ ದುರ್ಗುಣಿಯೆಂದು ಹೇಳಿದೆ
ಎಣಿಸದಿರೆನ್ನ ಅಪರಾಧ ವೆನುತಲಿ
ಮಣಿದನು ಶ್ರೀಹರಿ ಚರಣಕ್ಕೆ ಕೋಲೆ

ಸ್ವಾಮಿ ಭೃತ್ಯನ್ಯಾಯವರಿಯದೆ, ಪಾಮರನಂತೆ ನಾನಿನ್ನ ನುಡಿದೆ ಕ್ಷಮಿಸೆಂದು ಗೋಗರೆದ.

ಅರ್ಜುನ ಮಾತ್ರವಲ್ಲದೆ, ಸುಭದ್ರೆಯೂ ಅಣ್ಣನ ಬಳಿಬಂದು "ಹೆಣ್ಣು ಕೊಟ್ಟಮೇಲೆ ಹಿತವೆ ಚಿಂತಿಸಬೇಕು" ಅವರ ಅಪರಾಧ ಮನ್ನಿಸೆಂದು ಕೇಳಿಕೊಂಡಳು. ಹಾಗೆ ಅವರಿಬ್ಬರ ಮಾತು ಕೇಳಿ ಬಹಳ ನಗು ಬಂತು. "ಸೋದರತ್ತೆಯ ಮಗ, ಅದರಿಂದ ನಿನ್ನ ಕೊಟ್ಟೆ, ಹೆದರುವರೆ ಅವರು ನಮ್ಮನ್ನು" ಎಂದು ಕೃಷ್ಣಲೇವಡಿಮಾಡಿ ನಕ್ಕ. ಸುಭದ್ರೆ ತಾನು ನಿಂದಿಸಿದ್ದಕ್ಕೆ ಕ್ಷಮೆಯನ್ನು ರುಕ್ಮಿಣಿಯಿಂದಲೂ ಬೇಡಿದಳು. ಪಾದಕ್ಕೆರಗಿದ ಸುಭದ್ರೆಯನ್ನು ರುಕ್ಮಿಣಿ ಮೇಲೆತ್ತಿ, ಹಾಸ್ಯದ ಮಾತುಗಳಿಗೆ ಬೆಲೆಯಿಲ್ಲವೆಂದು ಸಮಾಧಾನಗೊಳಿಸಿ, ಅವಳನ್ನು ಸನ್ಮಾನಿಸಿ ಕಳಿಸಿಕೊಟ್ಟಳು. ಅರ್ಜುನನನ್ನು ಕೃಷ್ಣನು ಸಮಾಧಾನಗೊಳಿಸಿದ.

ಅಶ್ವಮೇಧಪರ್ವದ ಈ ಸಂಗತಿ ಕಟ್ಟುಕಥೆಯಲ್ಲ ಎಂದು ಮೋಹನದಾಸರು ಕೃತಿಯ ಕಡೆಯಲ್ಲಿ ಹಾಡಿದ್ದಾರೆ. ಮಂಗಳ ಹಾಡುತ್ತ ಕೃತಿಯ ಫಲವನ್ನು ಹೇಳಿದ್ದಾರೆ:

ಶುಭಗಳಾಗಲಿ, ಅಶುಭಗಳು ಓಡಲಿ
ಇಭವರದನೊಲುಮೆ ದೊರೆಯಲಿ ಕೋಲೆ
ಇಭವರದನೊಲುಮೆ ದೊರೆಯಲಿ ನಮ್ಮ ವಿಜಯ
ಪ್ರಭುಗಳ ಕೀರ್ತಿ ಮೆರೆಯಲಿ ಕೋಲೆ



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುಭ್ರ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ವೈಕುಂಠಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಟಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ, ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

ಯುವವಾಣಿ

# ಅದು ತಾರಕ ಇದು ಮಾರಕ

ನನ್ನ ಹೆಸರು ವಸುಭೂತಿ. ಜೀವಕ್ಕೆ ಶಾಂತಿ ನೀಡುವುದು ತಪಸ್ಸು—ಎಂಬ ವಿಚಾರ ನನಗೆ ಚೆನ್ನಾಗಿ ತಿಳಿದಿದೆ. ಅನುಭವದಿಂದ ನಾನದನ್ನರಿತಿದ್ದೇನೆ. ನಾನಿರುವ ತಪೋವನದಲ್ಲಿ ಫಲಪುಷ್ಪಗಳಿಗೇನೂ ಕೊರತೆ ಇಲ್ಲ. ಸಹಜ ವೈರಭಾವ ಮರೆತು ಹುಲಿ ಹುಲ್ಲೆಗಳು ನನ್ನ ಆಶ್ರಮದಲ್ಲಿ ಓಡಾಡುತ್ತವೆ. ಅದನ್ನು ನೋಡಿದಾಗ ನನಗೆ ತುಂಬ ಸಂತೋಷವಾಗುತ್ತದೆ. ಇಂತಹ ಮಧುರ, ಸಸ್ನೇಹ ವಾತಾವರಣ ಮಾನವ ಸಮಾಜದಲ್ಲುಂಟಾದರೆ ಎಷ್ಟು ಚೆನ್ನ—ಎಂದು ಕನಸು ಕಾಣುತ್ತೇನೆ.

ಆ ದಿನ ಭಗವಾನ್ ಭಾಸ್ಕರನಿಗೆ ಅರ್ಘ್ಯ ಪ್ರದಾನಮಾಡಿ ಆಶ್ರಮಕ್ಕೆ ಬರುವ ವೇಳೆಗೆ ನನಗೆ ಅನೇಕ ಶುಭ ಶಕುನಗಳಾಯ್ತು. ಜೀವ ಅದೇನೋ ಉಲ್ಲಾಸದ ಲಹರಿಯಲ್ಲೋಲಾಡಿತು. ನನ್ನ ಜೀವನದಲ್ಲಿ ಯಾವುದೋ ಮಹತ್ತರ ಘಟನೆ ಜರಗಬಹುದೆಂದು ಭಾಸವಾಯ್ತು. ಸುತ್ತಲೂ ವಿಸ್ತಾರವಾಗಿ ಹರಡಿದ್ದ ಸೃಷ್ಟಿಸೊಬಗನ್ನು ಕಾಣುತ್ತ, ಅದರ ಹಿಂದಿನ ಅವ್ಯಕ್ತ ಚೇತನದ ಕೌಶಲವನ್ನು ಧ್ಯಾನಿಸುತ್ತ ಬಳಿಯಲ್ಲಿದ್ದ ವಟವೃಕ್ಷದ ಕೆಳಗೆ ಗಂಭೀರವಾಗಿ ಕುಳಿತಿದ್ದೆ. ಅಷ್ಟರಲ್ಲಿ ಯಾವುದೋ ಒಂದು ದಿವ್ಯ ತೇಜಸ್ಸು ಗಗನದಿಂದ ಧರೆಗಿಳಿದಂತೆ ಕಂಡಿತು. ನೋಡನೋಡುತ್ತ ಅದು ಮಾನವಾಕಾರ ತಾಳಿತು. ನನ್ನಕಡೆಗೆ ನಡೆದು ಬರುತ್ತಿರುವಂತೆ ಕಂಡಿತು. ಗಮನಿಸಿ ನೋಡಿದೆ. ಬರುತ್ತಿದ್ದ ಆ ಪುಣ್ಯ ಪುರುಷ ದೇವರ್ಷಿನಾರದರೆಂದು ತಿಳಿಯಿತು. ಮಹತೀಗಾನ ರಸಿಕನೂ—ಭಗವದ್ಧ್ಯಾನ ಪಾರಾಯಣನೂ ಆದ ಆ ಪರಮಪೂಜ್ಯ ಮಹರ್ಷಿಯದರ್ಶನವೇ ಒಂದು ಸೌಭಾಗ್ಯ. ಅನಿರೀಕ್ಷಿತವಾಗಿ ಒದಗಿಬಂದ ಲಾಭವನ್ನು ಕಂಡು ನನ್ನ ಮನದಲ್ಲಿ ಹಲವಾರು ಬಗೆಯ ಯೋಚನೆ ಬಂತು. ಈ ಮಹಾತ್ಮರು ನಿಷ್ಕಾರಣವಾಗಿ ಆಗಮಿಸುವವರಲ್ಲ. ಏನೋವಿಶೇಷವೇ ಇರಬೇಕೆನ್ನಿಸಿತು. ನಾನವರಿಗೆ ನಮಸ್ಕರಿಸಿ—ಅರ್ಘ್ಯ ಪಾದ್ಯಾದಿಗಳನ್ನು ನೀಡಿ—ಮಧುಪರ್ಕವನ್ನು ಸಮರ್ಪಿಸಿ – ಧನ್ಯೋಸ್ಮಿ – ಎಂದೆ. ಅವರು ಯಥೋಚಿತ ಸತ್ಕಾರವನ್ನು ತುಂಬ ಅಭಿಮಾನದಿಂದ ಸ್ವೀಕರಿಸಿ ಕುಶಲ ಪ್ರಶ್ನೆಮಾಡಿದರು. ಮಾತಿನಮಧ್ಯೆ ಅದೆಷ್ಟೋ ಸಂಗತಿಗಳು ಸುಳಿದು ಹೋದವು.

ನಾರದರು ಅನುಭವಿಗಳು, ಅನುಭಾವಿಗಳು, ಇಂಗಿತಜ್ಞರು, ಸೂಕ್ಷ್ಮಮತಿ. ಮುಗುಳುನಗೆ ಬೀರುತ್ತ, ಮಹತೀವೀಣೆಯನ್ನಲ್ಲಿ ದರ್ಭಾಸನದ ಮೇಲಿಟ್ಟು,

ವಸುಭೂತಿ—ಅಂತರಂಗದ ಭಾವನೆಗಳನ್ನು ಬಹಿರಂಗಪಡಿಸದೇ ಇರುವುದು ಬಹುಕಷ್ಟದ ಕೆಲಸವಲ್ಲವೇ?—ಎಂದರು.

ಅದು ಇಷ್ಟದ ಕೆಲಸವೇ ಹೊರತು, ಕಷ್ಟದ ಕೆಲಸವಲ್ಲವೆಂದು ಪೂಜ್ಯರಲ್ಲಿ ವಿನಂತಿ ಮಾಡಬಯಸುತ್ತೇನೆ – ನಾನು ಹೇಳಿದೆ.

ನೀನು ಏನೇ ಹೇಳು ಅದು ತುಂಬ ಪ್ರಯಾಸವೆಂದೇ ನನಗನ್ನಿಸಿದೆ. ನಿನ್ನ ಮುಖವನ್ನು ಕಂಡ ಮೇಲಂತೂ ಅದು ಇನ್ನಷ್ಟು ಖಚಿತವಾಗುತ್ತಿದೆ, ನಿನ್ನ ಅಭಿಪ್ರಾಯ ಮುಖದಲ್ಲಿದ್ದು ಕಾಣುತ್ತಿದೆ. ನಿನ್ನ ಮನಸ್ಸಿನಲ್ಲಿ ಮೋಕ್ಷಾಪೇಕ್ಷೆ ಇದೆಯಲ್ಲವೇ?

ಎಲ್ಲ ಮುಮುಕ್ಷುಗಳಿಗೂ ಮೋಕ್ಷಾಪೇಕ್ಷೆ ಇದ್ದೇ ಇರುತ್ತದೆ.

ಆ ಮಾತು ಬೇರೆ, ಮುಮುಕ್ಷು ಎಂಬ ಮಾತಿಗದೇ ಅರ್ಥ. ಪದದ ಅರ್ಥವನ್ನು ಕುರಿತು ಚರ್ಚೆ ಬೇಡ. ನನ್ನ ಊಹೆ ಸರಿಯಷ್ಟೆ?—ನಾರದರು ನಗುತ್ತ ಕೇಳಿದರು.

ವಿದ್ವಾನ್ ಬ.ನ. ಗುಂಡೂರಾವ್

ಅವರ ಸೂಕ್ಷ್ಮದೃಷ್ಟಿಗೆ ನಾನು ಆಶ್ಚರ್ಯಪಟ್ಟೆ. ಇನ್ನು ಅವರ ಹತ್ತಿರ ಮರೆಮಾಚುವುದು ಪ್ರಯೋಜನವಿಲ್ಲವೆಂದು ನನಗೆ ತೋಚಿತು. ಹಿರಿಯರೂ ತ್ರಿಕಾಲಜ್ಞಾನಿಗಳೂ—ತ್ರಿಲೋಕಸಂಚಾರಿಗಳೂ ಆದ ನಾರದರಿಂದ ನನಗೊಂದು ಉಪಕಾರವಾಗಬೇಕಿತ್ತು. ಧೈರ್ಯಮಾಡಿ ಕೇಳಿ ಬಿಡೋಣವೆಂದು ನಿಶ್ಚಯಮಾಡಿ ಕೊಂಡೆ.

ದೇವರ್ಷಿಗಳೇ – ತಾವು ಸತ್ಯಲೋಕ ಕೈಲಾಸ, ವೈಕುಂಠ ಎಲ್ಲಕಡೆ ಸಂಚಾರಮಾಡುವವರು, ನನಗೊಂದು ಉಪಕಾರ ಮಾಡಲು ತಾವು ಹಿಂದೆಗೆಯುವುದಿಲ್ಲವೆಂದು ಭಾವಿಸಬಹುದಷ್ಟೆ?

ನನ್ನ ಮಾತುಕೇಳಿ ನಾರದರು ಮುಗುಳುನಗುತ್ತ—ಏನದು – ನಿಸ್ಸಂಕೋಚವಾಗಿ ಪ್ರಸ್ತಾಪಮಾಡು, ನನಗೆ ಸಾಧ್ಯವಾದ ಕೆಲಸವಾದಲ್ಲಿ ಖಂಡಿತ ಮಾಡಿಕೊಡುತ್ತೇನೆ—ಎಂದರು.

ಈ ಸಲ ಸತ್ಯಲೋಕಕ್ಕೆ ಹೋದಾಗ ಬ್ರಹ್ಮದೇವನನ್ನು ತಾವು ವಿಚಾರಿಸಬೇಕಾದ ವಿಷಯವಿದೆ—ಈ ವಸುಭೂತಿಗೆ ಮೋಕ್ಷದೊರೆಯುವುದೆಂದು7

ಇಷ್ಟೆತಾನೆ—ಖಂಡಿತ ಕೇಳಿಬರುತ್ತೇನೆ. ನಾನು ತರುವ ವಾರ್ತೆ ಬಹುಶಃ ನಿನಗೆ ಶುಭವಾರ್ತೆಯಾಗಿದ್ದರೂ ಆದೀತು.

ಸದ್ಯಕ್ಕೆ ಅಷ್ಟುಮಾಡಿ ಪುಣ್ಯಕಟ್ಟಿಕೊಳ್ಳಿ ನನ್ನ ಮನಸ್ಸಿನ ಆತಂಕವಾದರೂ ಕಡಿಮೆಯಾಗಲಿ—ಎಂದೆ.

ಬಹುಕಾಲಾನಂತರ ನಾರದರು ಪುನಃ ನನ್ನ ಆಶ್ರಮಕ್ಕೆ ಬಂದರು. ದೊಡ್ಡವರ ದರ್ಶನ ಶುಭವನ್ನು ತರುತ್ತದೆಂದು ನಾನು ಹಿರಿಯರಿಂದ ಕೇಳಿದ್ದೇನೆ. ನಾರದರು ಒಳ್ಳೆ

ಸುದ್ದಿ ತಂದಿರಬಹುದೆಂದು ನನಗೆ ಖಚಿತವಾಯಿತು. ಅವರನ್ನು ಯಥೋಚಿತವಾಗಿ ಸ್ವಾಗತಿಸಿದೆ, ಸತ್ಕರಿಸಿದೆ. ನನ್ನ ಮನವಿಯೇನಾಯ್ತೆಂದು ಪ್ರಸ್ತಾಪಮಾಡಿದೆ.

ನೋಡು ವಸುಭೂತಿ ನಾನು ಆ ವಿಷಯವನ್ನು ಬ್ರಹ್ಮದೇವನಲ್ಲಿ ಪ್ರಸ್ತಾಪಮಾಡಿದೆ ಮೋಕ್ಷಾರ್ಹಜೀವಿಗಳ ಪಟ್ಟಿಯನ್ನೇ ಅವರು ನನ್ನ ಕೈಗೆಕೊಟ್ಟರು. ಅದರಲ್ಲಿ ನಾನು ಸೋಜಿಗವನ್ನು ಕಂಡೆ.

ನಾರದರು ಕುತೂಹಲ ಕೆರಳುವಂತೆ ಹೇಳಿದರು.

ಅದರಲ್ಲಿ ನನ್ನ ಹೆಸರಿತ್ತೇನು? ಇದ್ದೇ ಇರುತ್ತದೆ

ನಾನು ಸಂತೋಷದಿಂದ ಕೇಳಿದೆ.

ವಸುಭೂತಿ–ಅಸಮಾಧಾನಮಾಡಿ ಕೊಳ್ಳಬೇಡ ಆ ಪಟ್ಟಿಯಲ್ಲಿ ನಿನ್ನ ಹೆಸರಿರಲಿಲ್ಲ.

ಇರಲಿಲ್ಲ? ನನ್ನ ಹೆಸರಿರಲಿಲ್ಲವೇ?

ನಾನು ನಾಲ್ಕಾರು ಬಾರಿ ಪಟ್ಟಿಯನ್ನು ನೋಡಿದ್ದೇನೆ. ಎಚ್ಚರಿಕೆಯಿಂದ ನೋಡಿದ್ದೇನೆ. ನಿನ್ನ ಹೆಸರಿರಲಿಲ್ಲ ವಸುಭೂತಿ.

ಇದಕ್ಕೆ ಕಾರಣವೇನಂತೆ?

ಅದು ಕೇಳಿದರೆ ನಿನಗಿನ್ನೂ ಅಸಮಾಧಾನವಾದೀತೇನೋ!!

ಚಿಂತೆ ಇಲ್ಲ ಹೇಳಿ ನಾರದರೆ. ಬ್ರಹ್ಮ ನನ್ನ ಹೆಸರಿಲ್ಲದ್ದಕ್ಕೆ ಏನು ಕಾರಣ ಸೂಚಿಸಿದರು?

ನಿನ್ನನ್ನು ಬ್ರಹ್ಮದೇವರು ತಪಸ್ವಿಯೆಂದು ಪರಿಗಣಿಸಿದ್ದಾರೆ. ನಿನ್ನ ಸಾಧನೆಯನ್ನುವರು ತುಂಬ ಮೆಚ್ಚಿಕೊಂಡಿದ್ದಾರೆ.

ಹಾಗಾದರೆ ಪಟ್ಟಿಯಲ್ಲಿ ನನ್ನ ಹೆಸರೇಕಿಲ್ಲ?

ನನ್ನ ಮಾತು ಇನ್ನೂ ಮುಗಿದಿಲ್ಲ. ಪೂರ್ತಿ ಕೇಳು, ವಸುಭೂತಿ ನಿನಗಿನ್ನೂ ಅಹಂಕಾರ ತಗ್ಗಿಲ್ಲವೆಂದು ವಾಣೀಪತಿಯ ಅಭಿಪ್ರಾಯವಿದೆ ಅಹಂಕಾರ ತಪಸ್ಸನ್ನು ನಾಶಮಾಡುತ್ತದೆ. ಆದ್ದರಿಂದ, ವಸುಭೂತಿಗೆ ಇನ್ನೂ ಮೋಕ್ಷದ ಅರ್ಹತೆ–ಅಧಿಕಾರವಿನ್ನೂ ಬಂದಿಲ್ಲ–ಎಂದು ಬ್ರಹ್ಮದೇವರು ನನಗೆ ತಿಳಿಸಿದರು.

ನಾರದರ ಮಾತು ಕೇಳಿ ನನಗೆ ದಿಗ್ಭ್ರಾಂತಿಯಾಯ್ತು. ಶಾಂತವಾಗಿ ಯೋಜನೆ

ಮಾಡಿದಾಗ ಅದು ಸತ್ಯವೆಂದೂ ಅರಿವಾಯ್ತು ಬ್ರಹ್ಮನ ಮಾತು-ಸುಳ್ಳಾಗಲು ಸಾಧ್ಯವೇ?

ಹಿರಿಯರ ಮುಂದೆ ತಪ್ಪೊಪ್ಪಿಕೊಳ್ಳುವುದು ಆತ್ಮೋನ್ನತಿಯ ಮಾರ್ಗದಲ್ಲಿಅಡ್ಡಿಯೇನಲ್ಲ; ತಪ್ಪು ಮಾಡುವುದು ತಪ್ಪಲ್ಲ- ಅದನ್ನು ತಿದ್ದಿಕೊಳ್ಳದೇ ಇರುವುದು ತಪ್ಪು- ಎಂದು ದೊಡ್ಡವರು ಹೇಳುತ್ತಾರೆ. ಇಷ್ಟೆಲ್ಲ ಯೋಜನೆಮಾಡಿ ನಾನು ನಾರದರ ಮುಂದೆ ಸ್ಪಷ್ಟವಾಗಿ ಹೇಳಿದೆ-ನಾನು ಬಹುದೊಡ್ಡ ತಪಸ್ವಿಯೆಂದು ನನ್ನ ಮನಸ್ಸಿನಲ್ಲಿ ಅಹಂಕಾರವಿತ್ತು. ನನ್ನ ಸಾಧನೆಯುವರದಿಯನ್ನೆಲ್ಲ ನಿಮ್ಮ ಮೂಲಕ ಬ್ರಹ್ಮದೇವರಿಗೆ ಕಳಿಸಬೇಕೆಂದೂ ಒಂದೊಂದು ಸಲ ಯೋಜನೆ ಬರುತ್ತಿತ್ತು. ಈಗ ನನ್ನ ಅವಿವೇಕ ಅರ್ಥವಾಯ್ತು. ಅಹಂಕಾರಕ್ಕಿಂತ ದೊಡ್ಡ ಶತ್ರು ಯಾರುಂಟು? ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ-ಎಂಬಗೀತಾವಾಕ್ಯದ ಅಭಿಪ್ರಾಯ ನನಗೀಗ ಅರ್ಥವಾಗುತ್ತಿದೆ.

ಹೀಗೆಲ್ಲ ಮಾತಾಡುತ್ತಿರುವಾಗ ಒಂದು ದಿವ್ಯ ವಿಮಾನ ಧರೆಗಿಳಿದು ಬಂತು. ನನ್ನನ್ನು ಕರೆದು ಕೊಂಡು ಹೋಗಲು ಬಂದಿದ್ದ ದೇವದೂತರು ಗೌರವದಿಂದ ಹೇಳಿದರು "ಕೃಪೆ ಮಾಡಿ ಈ ವಿಮಾನವನ್ನು ತಾವು ಪುನೀತಗೊಳಿಸಬೇಕು ಪಾವನ ಸ್ಪರ್ಶದಿಂದ." ನನಗೂ ಆಶ್ಚರ್ಯವಾಯ್ತು - ನಾರದರಿಗೂ ಆಶ್ಚರ್ಯವಾಯ್ತು, ನಾವಿಬ್ಬರೂ ಆ ವಿಮಾನದಲ್ಲಿ ಕುಳಿತು ಬ್ರಹ್ಮಲೋಕಕ್ಕೆ ಹೊರಟೆವು. ಅಲ್ಲಿ ನಾರದರು ಪ್ರಶ್ನಾರ್ಥಕ ದೃಷ್ಟಿಯಿಂದ ತಮ್ಮ ತಂದೆಯ ಮುಖವನ್ನು ನೋಡಿದರು. ಅವರಿಗೆ ನಾರದರ ಮನೋಗತ ಕೂಡಲೆ ಅರ್ಥವಾಯ್ತು.

"ನೋಡು ನಾರದ, ಈ ವಸುಭೂತಿಗೆ ಮೋಕ್ಷಾಧಿಕಾರವಿನ್ನೂ ಬಂದಿಲ್ಲವೆಂದುಆ ದಿನ ನಾನು ಹೇಳಿದ್ದು ನಿಜ, ಆದರೆ ನಿನಗೀಗ ಅನುಮಾನ ಬಂದಿರಬೇಕಲ್ಲವೇ?

ಬ್ರಹ್ಮದೇವ ನಗುತ್ತ ಕೇಳಿದರು.

ಅದಿನ ಹಾಗೆ ಹೇಳಿ ಈ ದಿನ ಅದೇ ವಸುಭೂತಿಯನ್ನು ಸನ್ನಿಧಾನಕ್ಕೆ ಕರೆಸಿಕೊಳ್ಳೋಣವಾಗಿದೆ: ದೇವರಹಸ್ಯ ಯಾರಿಗೆ ತಾನೆ ಅರ್ಥವಾದೀತು? ನಾರದರು ನುಡಿದರು.

ನಾರದ, ಇದರಲ್ಲಿ ದೇವರಹಸ್ಯವೇನು ಬಂತು? ಯಾರೇ ಆಗಲಿ ತನ್ನಲ್ಲಿ ಅಹಂಕಾರವಿದೆಯೆಂಬುದನ್ನು ಅರಿತು ಕೊಂಡರೆ ಅದನ್ನು ನಿವಾರಿಸಿಕೊಳ್ಳಲು ಅವಕಾಶವಾಗುತ್ತದೆ. ಅಹಂಕಾರದ ಅರಿವೇ ಅಹಂಕಾರವನ್ನು ನಾಶ ಮಾಡುತ್ತದೆ. ಕೆಲವರಿಗಂತೂ ತಮ್ಮಲ್ಲಿ ಅಹಂಕಾರವಿದೆಯೆಂದೂ ಅರಿವಾಗುವುದಿಲ್ಲ. ಅಂತಹ ಅವಿವೇಕಿಗಳಿಗೆ ಮೋಕ್ಷ ಬಹುದೂರದ ಹಣ್ಣು. ವಸುಭೂತಿಯ ವಿಚಾರ ಹಾಗಲ್ಲ ನಿನ್ನ,ಮಾತು ಕೇಳಿದ ಕೂಡಲೆ ಅವನಿಗೆ ತನ್ನಲ್ಲಿರುವ ಅಹಂಕಾರದ ಅರಿವಾಗಿದೆ. ಅದು ದೊಡ್ಡ ತಪ್ಪೆಂದೂ ಅರ್ಥವಾಗಿದೆ. ಅದಕ್ಕಾಗಿ ಪಶ್ಚಾತ್ತಾಪವೂ ಆಗಿದೆ. ಇದೆಲ್ಲದರ ಪರಿಣಾಮವಾಗಿ ಆತನ ಚಿತ್ತಶುದ್ಧವಾಗಿದೆ. ಶುದ್ಧಚಿತ್ತರಾದರಾಯ್ತು. ಅಂತಹವರ ಎಲ್ಲ ಸಾಧನೆಯೂ ಫಲ ಕೊಡುತ್ತದೆ. ಆದ್ದರಿಂದ ವಸುಭೂತಿಗೆ ಇಲ್ಲಿ ಸ್ಥಾನ ದೊರೆತಿದೆ.

ಮೋಕ್ಷ ಮಾರ್ಗೇತ್ವಹಂಕಾರಃ
ಪರಿಘೆವದ್ದುರತಿಕ್ರಮಃ

ಎಂಬ ಮಾತನ್ನು ನೀನು ಕೇಳಿಲ್ಲವೇ ನಾರದ? ಮೋಕ್ಷ ಮಾರ್ಗದಲ್ಲಿ ಅಹಂಕಾರ ವೆಂಬುದು ಬೃಹದಕಾರದ ಪರಿಘದಂತೆ ಭಾರಿ ಅಡ್ಡಣೆ ಯಾಗುತ್ತದೆ.

ತಂದೆ ಮಕ್ಕಳ ಮಾತನ್ನು ಕೇಳುತ್ತ ನಾನು ಸುಮ್ಮನೆ ನಿಂತಿದ್ದೆ. ಕೃತಜ್ಞತಾಭಾರದಿಂದ ನನ್ನ ತಲೆ ತಗ್ಗಿಹೋಗಿತ್ತು.

ದುರಹಂಕಾರ ವಿಘ್ನಕಾರಕಃ
ನಿರ ಹಂಕಾರ ಮೋಕ್ಷದಾಯಕಃ

-ಎಂಬ ಮಾತು ಮಿಂಚಿನಂತೆ ಹೊಳೆಯಿತು. ನನ್ನ ಕಥೆ ಜಗದ ಜನಕ್ಕೆ ಮಾರ್ಗ ದರ್ಶನವನ್ನು ನೀಡಬಲ್ಲುದಾದರೆ ಅದಕ್ಕಿಂತಲೂ ಸಂತಸ, ತೃಪ್ತಿ ಏನುಂಟು?



## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ-517501

ಜನನೀ ಮೇ ಜಾಯಾ ಮೇ
ಬಂಧುವರ್ಗಶ್ಚ ಮೇ ।
ಇತಿ ಮೇ ಮೇ ಕುರ್ವಾಣಂ
ಕಾಲವೃಗೋ ಹಂತಿ ಪುರುಷಾಜಂ ॥

ನನ್ನ ತಾಯಿ, ನನ್ನ ಹೆಂಡತಿ, ನನ್ನ ಬಂಧುಬಳಗ ಎಂದು "ಮೇಮೇ" (ನನ್ನದ್ದು ನನ್ನದ್ದು) ಎಂದು ಅರಚುತ್ತಿರುವ ಮನುಷ್ಯನೆಂಬ ಆಡನ್ನು ಮೃತ್ಯುವೆಂಬ ಮೃಗವು ಕೊಲ್ಲುತ್ತದೆ. ಈ ಸುಭಾಷಿತದಲ್ಲಿ ವ್ಯಕ್ತಿಯನ್ನು 'ಅಜ' ಎಂಬ ಪ್ರಾಣಿಗೆ ಹೋಲಿಸಿ, 'ಮೃತ್ಯು' ವನ್ನು ಇದರ ಪ್ರಾಣಘಾತಕನನ್ನಾಗಿ ನಿರ್ದೇಶಿಸಲಾಗಿದೆ.

ಇದೇರೀತಿ, ಶ್ರೀಮನ್ಮಹಾಭಾರತದಲ್ಲಿ, ಮನುಷ್ಯನಲ್ಲಿರುವ ಹಲವಾರು ದುರ್ಗುಣಗಳನ್ನು ಬೇಟೆಗಾರನೆಂದೂ, ಮನುಷ್ಯನನ್ನು ಮೃಗವೆಂದೂ, ಸಂಬೋಧಿಸಿದ ಪ್ರಸಂಗವೊಂದು ಇಂತಿದೆ:

ಕ್ರೋಧಃಕಾಮಃ ಲೋಭಮೋಹೌ
ವಿಧಿತ್ಸಾಽಕೃಪಾಸೂಯಾಮಾನ
ಶೋಕೌ ಸ್ಪೃಹಾ ಚ ।
ಈರ್ಷ್ಯಾಜುಗುಪ್ಸಾ ಚ ಮನುಷ್ಯ
ದೋಷಾ
ವರ್ಜ್ಯಾಃ ಸದಾ ದ್ವಾದಶೈತೇ
ನರಾಣಾಂ ।
ಏಕೈಕಃ ಪರ್ಯುಪಸ್ತೇಹಃ ಮನುಷ್ಯಾನ್
ಮನುಜರ್ಷಭ ।
ಲಿಪ್ಸಮಾನೋಂತರಂ ತೇಷಾಂ
ಮೃಗಾಣಾಮಿವ ಲುಬ್ಧಕಃ ॥

ಕ್ರೋಧ, ಕಾಮ, ಲೋಭ, ಮೋಹ, ಅಸಂತೃಪ್ತಿ, ನಿರ್ದಯತಾ, ಅಸೂಯಾ, ಅಭಿಮಾನ, ಶೋಕ, ಸ್ಪೃಹಾ, ಈರ್ಷ್ಯಾ, ಮತ್ತು ಜುಗುಪ್ಸಾ, ಇವು ಹನ್ನೆರಡು ಮಾನವೀಯ ದೋಷಗಳು. ಇವುಗಳಿಂದ ಸರ್ವಥಾ ಮನುಷ್ಯ ದೂರನಾಗಿರಬೇಕು. ಇವುಗಳಲ್ಲಿ ಒಂದೊಂದೂ ತಕ್ಕ ಸಮಯವನ್ನು ಹೊಂಚುಹಾಕಿ ಮನುಷ್ಯನಿಗೆ ಮಾರಕವಾದ ಬೇಟೆಗಾರನಾಗುವ ಸಂಭವವಿದೆ. ಇವುಗಳ ಪೂರ್ಣ ಪರಿಚಯವನ್ನು ಮಾಡಿಕೊಂಡು ಇವು ತನ್ನಲ್ಲಿ ಮನೆ ಮಾಡದಂತೆ ಪ್ರತಿಯೊಬ್ಬನೂ ಎಚ್ಚರವಾಗಿರುವುದು ಅಗತ್ಯ.

ಕ್ರೋಧ:

'ಪ್ರತಿಕೂಲೇ ಸತಿ ತೈಕ್ಷ್ಣ್ಯಸ್ಯ ಪ್ರಬೋಧಃ ಕ್ರೋಧಃ' ಎಂದು ಕ್ರೋಧದ ಲಕ್ಷಣವನ್ನು ಹೇಳಲಾಗಿದೆ. ಪ್ರತಿಕೂಲವಾದ ಪರಿಸ್ಥಿತಿಯು ಎದುರಾದಾಗ ಜಾಗೃತವಾಗುವ ತೀಕ್ಷ್ಣತೆಯೇ ಕ್ರೋಧ.

ಕಾಮ:

'ಕಾಮ್ಯತ ಕಾಮಃ' ಎಂಬಂತೆ ಇದೊಂದು ಇಚ್ಛಾ ವಿಶೇಷ. ಭಗವದ್ಗೀತೆಯಲ್ಲಿ 'ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ' ಎಂದು ಇದನ್ನು ಪಾಪಕರ್ಮ ಜನಕ ಎಂದು ಘೋಷಿಸಲಾಗಿದೆ.

ಲೋಭ:

'ಪರದ್ರವ್ಯಾಭಿಲಾಷಃ ಲೋಭಃ' ತನಗೆ ಸಂಬಂಧಿಸದ, ಇತರರಿಗೆ ಸೇರಿದ ವಸ್ತುವಿನ ಅಭಿಲಾಷೆಯೇ 'ಲೋಭ'. ಇದು ಸಕಲ ಪಾಪಗಳಿಗೂ ಮೂಲ.'ಲೋಭಮೂಲಾನಿಪಾಪಾನಿ.

# ಬೇಟೆಗಾರರು

ಮೋಹ:

ಅಜ್ಞಾನ ಅಥವಾ ತಪ್ಪುಗ್ರಹಿಕೆಯೇ 'ಮೋಹ' ಇದನ್ನೇ. ಒಂದು ರೀತಿಯಲ್ಲಿ 'ಅವಿದ್ಯಾ' ಎಂದು ಕರೆಯಲಾಗುವುದು. ದೇಹಾದಿಷು ಆತ್ಮಬುದ್ಧಿಃ (ದೇಹವನ್ನೇ 'ಆತ್ಮಾ' ಎಂದು ಅರಿತಿರುವುದು, ಧರ್ಮವಿಮೂಢತ್ವಂ (ಧರ್ಮದಲ್ಲಿ ಮೂಢತನ).

ವಿಧಿತ್ಸಾ:

'ಅಸಂತುಷ್ಟಿ ಎಂಬುದರ ಪರ್ಯಾಯ ಪದವಿದು ಈ ದುರ್ಗುಣವೂ ಮನುಷ್ಯನಿಗೆ ಮಾರಕವೇ.

ಅಕೃಪಾ:

'ಕೃಪೆಗೆ' ವಿರುದ್ಧವಾದದ್ದು 'ಅಕೃಪಾ'. 'ಕೃಪಾ' ಎಂಬುದರ ಲಕ್ಷಣವು "ಪರದುಃಖ ಹಾನೇಚ್ಛಾ" ಎಂದಾಗಿದೆ. ಇದಕ್ಕೆ ವಿರೋಧವಾದದ್ದು ಅಕೃಪಾ ಎಂದರೆ. ಇನ್ನೊಬ್ಬರ ದುಃಖವನ್ನು ಕಣ್ಣಾರೆ ಕಂಡರೂ, ಅದನ್ನು ನೀಗಿಸುವ ಸಾಮರ್ಥ್ಯ ಹಾಗೂ ಅವಕಾಶಗಳಿದ್ದರೂ ಆ ದಿಶೆಯಲ್ಲಿ ಯತ್ನಿಸದಿರುವ ಮನೋಭಾವ "ಅಕೃಪಾ".

ಅಸೂಯಾ:

'ಪರಗುಣೇ ದೋಷಾರೋಪಃ ಅಸೂಯಾ'. ಇತರರ ಸದ್ಗುಣಗಳನ್ನು ಸಹಿಸದೆ, ದೋಷಾರೋಪಣ ಮಾಡುವ ಸ್ವಭಾವ ಅಸೂಯಾ. ಸಮಯ ವಿಶೇಷದಲ್ಲಿ ಈ ದುರ್ಗುಣ ಪರಘಾತಕಕ್ಕೂ ಕಾರಣವಾಗುವುದು.

ಮಾನ:

ದುರ್ಯೋಧನನ ಸರ್ವನಾಶಕ್ಕೆ ಈ ದುರ್ಗುಣವೇ ಕಾರಣವಾಯಿತು. 'ಮತ್ಸಮೋ ನಾಸ್ತೀತಿ ಮನನಂ ಮಾನಃ' 'ಧನಾದ್ಯುತ್ಕರ್ಷೇಣ ಚಿತ್ತೋನ್ನತಿಃ ಮಾನಃ-ನನಗೆ ಸಮಾನರಿಲ್ಲ.' ಎಂದು ಹೆಮ್ಮೆ ಪಡುವ ದುರ್ಗುಣ ಮಾನ. ಅಂತೆಯೇ ಐಶ್ವರ್ಯಾದಿಗಳಿಂದ ತನ್ನ ಮನಸ್ಸನ್ನು ಮೇಲೇರಿಸಿಕೊಂಡು ಮೆರೆಯುವಿಕೆ "ಅಭಿಮಾನ, ಅಹಂಕಾರ" ಇವು ಈ ಮಾನಪದ ಪರ್ಯಾಯಾಗಳು.

ಶೋಕ;

"ಇಷ್ಟವಿಯೋಗಾನುಚಿಂತನಂ" –ಶೋಕ ಇಷ್ಟವಾದದ್ದು ದೂರವಾದಾಗ ಕಣ್ಮರೆಯಾದಾಗ ಅದರ ಬಗೆಗೆ ಉಂಟಾಗುವ ಚಿಂತೆ, ಅಥವಾ ಅತ್ಯಂತ ಪ್ರಿಯರಾದ ಬಂಧುಗಳೇ ಮೊದಲಾದವರ ವಿಯೋಗ ವುಂಟಾದಾಗ ಆಗುವ ಮಾನಸಿಕ ಪೀಡೆಯೇ 'ಶೋಕ'. ಈ ಗುಣವೂ ಪ್ರಾಣಘಾತಕವಾಗುವ ಸನ್ನಿವೇಶಗಳು ಹಲವಾರು.

ಸ್ಪೃಹಾ:

"ಇಚ್ಛೆ" 'ಈರ್ಷ್ಯಾ' ಇನ್ನೊಬ್ಬರ ಉತ್ಕರ್ಷವನ್ನು ಸಹಿಸದಿರುವಿಕೆ, ಜುಗುಪ್ಸಾ ಎಂದರೆ ನಿಂದೆ.

ಈ ದ್ವಾದಶ ದುರ್ಗುಣಗಳೆಂಬ ಬೇಟೆಗಾರರಿಂದ ಪ್ರತಿಯೊಬ್ಬ ಮಾನವನೂ ತನ್ನನ್ನು ಸಂರಕ್ಷಿಸಿ ಕೊಂಡು ಜನ್ಮವನ್ನು ಸಾರ್ಥಕಪಡಿಸಿಕೊಳ್ಳಬೇಕು.

ವಿದ್ವಾನ್ ಬಿ. ಬಾಲಗಣಪತಿಭಟ್ಟ

(6 ನೇ ಪುಟದಿಂದ)

ಅವರ ಮರು ಪ್ರಯಾಣದಲ್ಲಿ ಹಲವಾರು ಷಡ್ದರ್ಶನ ವಿಚಕ್ಷಣರು ಅವರಿಗೆ ಪಂಥಾಹ್ವಾನ ನೀಡಿ ಅವರಲ್ಲಿ ವಾದ ಕೈಗೊಂಡಿದ್ದರು ಇಂಥವರಲ್ಲಿ ಪ್ರಮುಖರಾದವರೆಂದರೆ ಶೋಭನ ಭಟ್ಟ, ಮತ್ತು ಸ್ವಾಮಿ (ಶ್ಯಾಮ) ಶಾಸ್ತ್ರಿ. ಇವರಿಬ್ಬರೂ ವಾದದಲ್ಲಿ ಸೋತು ಆಚಾರ್ಯರ ಶಿಷ್ಯರಾದರು. ಸನ್ಯಾಸ ಕೈಗೊಂಡರು. ಶೋಭನ ಭಟ್ಟರು ಪದ್ಮನಾಭ ತೀರ್ಥರಾಗಿ, ಸ್ವಾಮಿ ಶಾಸ್ತ್ರಿಗಳು ನರಹರಿತೀರ್ಥರಾಗಿ ಯತಿಗಳಾದರು. ಪದ್ಮನಾಭತೀರ್ಥರು ಆಚಾರ್ಯರ ಬ್ರಹ್ಮಸೂತ್ರ ಭಾಷ್ಯ, ಅನುವ್ಯಾಖ್ಯಾನ ಮತ್ತು ದಶಪ್ರಕರಣಗಳಿಗೂ ನರಹರಿ ತೀರ್ಥರು "ಗೀತಾಭಾಷ್ಯ" ಮತ್ತು "ಕರ್ಮ ನಿರ್ಣಯ" ಗಳಿಗೂ ವ್ಯಾಖ್ಯಾನ ಬರೆದರು. ಆಚಾರ್ಯ ಮಧ್ವರು ಅದ್ವೈತಿಗಳಾದ ತಮ್ಮ ಗುರು ಅಚ್ಯುತ ಪ್ರಜ್ಞರನ್ನೇ ವಾದದಲ್ಲಿ ತನ್ನೊಡಗೆ ತಿರುಗಿಸಿದರು.

ಉಡುಪಿಯಲ್ಲಿ ಕೃಷ್ಣ : ಮಧ್ವರ ಪ್ರಮುಖ ಕಾರ್ಯಗಳಲ್ಲೊಂದು ಕೃಷ್ಣದೇವಾಲಯ ಮತ್ತು ಇಲ್ಲಿನ ಪೂಜೆಗಾಗಿ ಅಷ್ಟಯತಿಗಳ ಮಠಗಳನ್ನು ಸ್ಥಾಪಿಸಿರುವುದು. ಈ ಕೃಷ್ಣವಿಗ್ರಹದ ಕುರಿತು ಹಲವಾರು ದಂತ ಕಥೆಗಳು ಇವೆ. ಹದಿನೇಳನೆಯ ಶತಮಾನದಲ್ಲಿದ್ದ ಫಲಿಮಾರು ಮಠದ ರಘುವರ ತೀರ್ಥರು ತಮ್ಮ 'ಅಣುಮಧ್ವವಿಜಯ' ದ ವ್ಯಾಖ್ಯಾನದಲ್ಲಿ ಈ ವಿಗ್ರಹದ ಬಗೆಗೆ ಹೀಗೆ ಹೇಳಿದ್ದಾರೆ–"ದ್ವಾರಕೆಯಿಂದ ಈ ವಿಗ್ರಹವನ್ನು ಸಾಗಿಸುತ್ತಿದ್ದ ಹಡಗೊಂದು ಮಲ್ಪೆಯ ಬಳಿ ಸಮುದ್ರದಲ್ಲಿ ಮುಳುಗಿ ಹೋಯಿತು. ಅದೇ ವಿಗ್ರಹವನ್ನು ಆಚಾರ್ಯ ಮಧ್ವರು ಸಮುದ್ರದಿಂದ ತಂದು ಈಗಿನ ಕೃಷ್ಣದೇವಾಲಯವನ್ನು ಕಟ್ಟಿಸಿ ಅಲ್ಲಿ ಸ್ಥಾಪಿಸಿದರು." ಮುಳುಗುತ್ತಿದ್ದ ಹಡಗನ್ನು ಅವರು ರಕ್ಷಿಸಿದಾಗ ಹಡಗಿನ ಕಪ್ತಾನನು ಬಹುಮಾನವಾಗಿ ಕೊಟ್ಟ ಗೋಪೀಚಂದನದ ಗಟ್ಟಿಯಲ್ಲಿ ವಿಗ್ರಹವನ್ನು ಪಡೆದರೆಂದು ಮುಂದೆ ಹುಟ್ಟಿಕೊಂಡ ಕತೆ. ನೀರಿನಲ್ಲಿ ಮುಳುಗಿದ್ದ ವಿಗ್ರಹವನ್ನು ತಂದು ಪ್ರತಿಷ್ಠಿಸಿದ್ದಾಗಿ ಮಧ್ವವಿಜಯದಲ್ಲಿ ಹೇಳಿದೆ ಈ ಕೃಷ್ಣದೇವಾಲಯದ ಸ್ಥಾಪನೆಯನಂತರ ಮಧ್ವರ ಮಹತ್ವದಿಂದ ಉಡುಪಿ ಯಾತ್ರಾಸ್ಥಳವಾಗಿ ವಿದ್ಯಾಕೇಂದ್ರವಾಗಿ ಪ್ರಸಿದ್ಧವಾಯಿತು. ಭಕ್ತ ಕನಕದಾಸನಿಗೆ ದರ್ಶನಕೊಡುವುದಕ್ಕಾಗಿ ಕೃಷ್ಣನು ಪಶ್ಚಿಮಕ್ಕೆ ತಿರುಗಿದನೆಂದೂ ಪಶ್ಚಿಮದ ಗೋಪುರದ ಗೋಡೆಯಲ್ಲಿ ಬಿರುಕೊಡೆದು ಕಿಂಡಿಯುಂಟಾಯಿತೆಂದೂ ಕನಕನ 'ಕಿಂಡಿಯ ಕತೆ' ಪ್ರಸಿದ್ಧವಾಗಿದೆ. ವಿಗ್ರಹದ ಪ್ರತಿಷ್ಠಾಪನೆಯೇ ಪಶ್ಚಿಮಾಭಿಮುಖವಾಗಿರಬೇಕು. ಹಿಂದಿರುವ ಅನಂತೇಶ್ವರನಿಗೆ ಬೆನ್ನು ಹಾಕುವುದು ಬೇಡವೆಂದೋ ವಿಗ್ರಹವು ಪಶ್ಚಿಮ ಸಮುದ್ರತೀರದಿಂದ ಬಂದುದರಿಂದಲೋ ಅದನ್ನು ಪಶ್ಚಿಮಾಭಿಮುಖವಾಗಿ ಪ್ರತಿಷ್ಠಿಸಿರಬಹುದು. ಕಟ್ಟಡದ ಅಡಿಪಾಯದ ದೋಷದಿಂದ ಅಥವಾ ಇನ್ನಾವುದೋ ಕಾರಣದಿಂದ ಒಡೆದ ಬಿರುಕಿಗೆ ಕಾಕತಾಳೀಯ ನ್ಯಾಯದಿಂದ ಕನಕನ ಕತೆ ಸೇರಿಕೊಂಡಿರುವ ಸಾಧ್ಯತೆಯಿದೆ.

ಕೆಲವು ವರ್ಷಗಳನಂತರ ಮಧ್ವರು ಎರಡನೆಯ ಉತ್ತರಭಾರತಯಾತ್ರೆಯನ್ನು ಕೈಗೊಂಡರು ಈ ಸಲವೂ ಅವರು ಅಲ್ಲಲ್ಲಿ ವಾದಗೋಷ್ಠಿಗಳನ್ನು ಏರ್ಪಡಿಸಿ ತಮ್ಮ ಅನುಯಾಯಿ ಶಿಷ್ಯರನ್ನು ಹೆಚ್ಚಿಸಿಕೊಂಡರು. ಹಲವರು ಅವರಿಂದ ಸನ್ಯಾಸವನ್ನೂ–ಸ್ವೀಕರಿಸಿದರು. ದೇಶದಾದ್ಯಂತ ಅವರ ತತ್ತ್ವ ಪ್ರಚಾರವಾಯಿತು. ಈ ಬಾರಿ ಅವರು ಬದರಿ, ಡಿಲ್ಲಿ, ಕುರುಕ್ಷೇತ್ರ, ಕಾಶಿ, ಗೋವಾ ಮೊದಲಾದ ಕ್ಷೇತ್ರಗಳನ್ನು ಸಂದರ್ಶಿಸಿ ಹಿಂತಿರುಗಿದರು.

ಮಧ್ವವಿಜಯದಲ್ಲಿ ಉಲ್ಲೇಖಿಸಿದ ಒಂದು ವಿಚಾರ ಗಮನಾರ್ಹವಾಗಿದೆ. ಪುಂಡರೀಕಪುರಿ ಎಂಬೊಬ್ಬ ವಿದ್ವಾಂಸ ಆಚಾರ್ಯರಿಗೆ ಪಂಥಾಹ್ವಾನನೀಡಿ ಅವರೊಡನೆ ನಡೆದ ಗಹನವಾದ ಗೋಷ್ಠಿಯಲ್ಲಿ ಸೋತ. ಅವನ ಕಡೆಯವನಾದ ಪದ್ಮತೀರ್ಥನು ಆಚಾರ್ಯರ ಅಮೂಲ್ಯವಾದ ಗ್ರಂಥ ಭಂಡಾರವನ್ನು ಅಪಹರಿಸಿದ. ಕುಂಬಳೆಯ ರಾಜ ಜಯಸಿಂಹನ ಸಹಾಯದಿಂದ ಅದು ಮರಳಿ ದೊರೆಯಿತಂತೆ. ಆಚಾರ್ಯರ ವಿದ್ವತ್ತಿನ ಮೇಲೆ ಅಸೂಯೆ ಪಟ್ಟ ಕುಹಕಿಗಳೂ ಇದ್ದರು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಪ್ರಾಯಶಃ ಕುಂಬಳೆಯ ಜಯಸಿಂಹನ (ರಾಜನ) ಆಸ್ಥಾನಪಂಡಿತನೂ ಪ್ರಮುಖ ಅದ್ವೈತ ವೇದಾಂತಿಯೂ ಆದ ಕಾಸರಗೋಡಿನ ಪಕ್ಕದ 'ಕಾವು' ಎಂಬಲ್ಲಿದ್ದ ತ್ರಿವಿಕ್ರಮ ಪಂಡಿತಾಚಾರ್ಯನು ಮಧ್ವರೊಡನೆ ನಡೆದ ವಾದದಲ್ಲಿ ಸೋತು ಅವರ ಅನುಯಾಯಿಯಾದ. ಕಾವು ಮತ್ತು ಕೂಡ್ಲು ಸಮೀಪದ ವಿಷ್ಣುಮಂಗಲ ಕ್ಷೇತ್ರಗಳು ಮಧ್ವರ ಪ್ರಮುಖ ಕಾರ್ಯಕ್ಷೇತ್ರಗಳಾಗಿದ್ದವು ಈತ ಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ "ತತ್ತ್ವಪ್ರದೀಪ" ವೆಂಬ ವ್ಯಾಖ್ಯಾನ ಬರೆದು ಪ್ರಸಿದ್ಧನಾಗಿದ್ದಾನೆ. ಇವನ ಮಗನೇ ಆಚಾರ್ಯರ ಜೀವನ ಚರಿತ್ರೆಯಾದ "ಸುಮಧ್ವವಿಜಯ"ವನ್ನು ಬರೆದ ನಾರಾಯಣ ಪಂಡಿತಾಚಾರ್ಯ. ಆಚಾರ್ಯರ ಪ್ರಭಾವಳಿಯಲ್ಲಿ ಹೀಗೆ ಎಷ್ಟೋ ಜನ ವಿದ್ವಾಂಸರು ಮೆರುಗಿದ್ದಾರೆ. ಸನ್ಯಾಸವನ್ನೂ ಸ್ವೀಕರಿಸಿದ್ದಾರೆ. ಮಧ್ವರ ತಮ್ಮನೇ ವಿಷ್ಣುತೀರ್ಥರೆಂಬ ಹೆಸರಿನಿಂದ ಸನ್ಯಾಸ ಸ್ವೀಕರಿಸಿದ. ಇವರೂ ಉಳಿದು ಏಳು ಮಂದಿ ಸೇರಿ ಅವರ ಆತ್ಮೀಯ ಸನ್ಯಾಸಿ ಶಿಷ್ಯರು ಶ್ರೀಕೃಷ್ಣನ ಪೂಜೆಗಾಗಿ ಸ್ಥಾಪಿಸಿದ ಎಂಟು ಮಠಗಳ ಮೊದಲ ಅಧಿಪತಿಗಳಾದರು.

# ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ಗರುಡಾದ್ರಿನಗರ ಕಾಟೇಜುಗಳು

ಪ್ರತಿ ಅಂತಸ್ತಿನಲ್ಲೂ 4 ಸೂಟ್‌ಗಳಿರುವಂತೆ ಎರಡು ಅಂತಸ್ತುಗಳ 18 ಕಾಟೇಜುಗಳನ್ನು ತಿ ತಿ ದೇ ನಿರ್ಮಿಸುತ್ತಿದೆ.

* ಪ್ರತಿ ಸೂಟ್ ಸಹ 10'×12' ಗಳ ಒಂದು ಕೋಣೆ ಹಾಗೂ ಹೊಂದಿಕೊಂಡ ಶೌಚಗೃಹ, ಸಾಮಾನ್ಯ ವೆರಾಂಡಾವನ್ನು ಹೊಂದಿರುತ್ತದೆ.

  30000 ರೂಗಳ ದಾನದಿಂದ ಒಬ್ಬರು 320 ಚದರಡಿ ಪ್ಲಿಂತ್ ಏರಿಯಾದ ಒಂದು ಸೂಟನ್ನು ತಮ್ಮ ಹೆಸರಿನಲ್ಲಿ ಕಟ್ಟಿಸಬಹುದು. ಅಪೇಕ್ಷಿಸಿದಲ್ಲಿ 8 ಸೂಟ್‌ಗಳ ಇಡೀ ಕಾಟೇಜನ್ನು 2 4 ಲಕ್ಷ ರೂಗಳ ದಾನದ ಮೂಲಕ ಅಥವಾ 4 ಸೂಟ್ ಗಳನ್ನು 1 2 ಲಕ್ಷ ರೂಗಳ ದಾನದ ಮೂಲಕ ಅಥವಾ 60000 ರೂಗಳ ದಾನದ ಮೂಲಕ 2 ಸೂಟ್‌ಗಳನ್ನು ನಿರ್ಮಿಸಬಹುದು

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ ತಿ.ದೇ ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ15 ವರ್ಷಕ್ಕೆ ಮಾತ್ರ ಸೀಮಿತ.
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಿಡಲಾಗುವುದು.

ತಿ ತಿ.ದೇ ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

ಈ ಯತಿಗಳ ಶಿಷ್ಯಪರಂಪರೆ ಶ್ರೀಕೃಷ್ಣನ ಪೂಜೆಯನ್ನು ಸುವ್ಯವಸ್ಥಿತವಾದ ಪರ್ಯಾಯ ಕ್ರಮದಿಂದ ನಡೆಸಿಬರುತ್ತದೆ. ಎರಡು ತಿಂಗಳಿಗೊಮ್ಮೆ ಪ್ರತಿಯೊಬ್ಬರಿಗೆ ಬರುವ ಶ್ರೀಕೃಷ್ಣಪೂಜಾ ಪರ್ಯಾಯ ಕ್ರಮವು ಸೋದೆ ವಾದಿರಾಜರ ಕಾಲದಲ್ಲಿ ಎರಡು ವರ್ಷಗಳಿಗೊಮ್ಮೆಯಾಗಿ ಬದಲಾಗಿ ವಿಜೃಂಭಣೆಯಿಂದ ನಡೆಯುತ್ತದೆ. ಪರ್ಯಾಯವನ್ನು ಸ್ವೀಕರಿಸುವ ದಿನವನ್ನು ಮಹೋತ್ಸವವಾಗಿ ಆಚರಿಸಲಾರಂಭಿಸಿದರು. ಈ ಪರ್ಯಾಯ ಮಹೋತ್ಸವ ದೇಶದಲ್ಲೇ ಪ್ರಸಿದ್ಧವೆನಿಸಿದೆ.

ಪದ್ಮನಾಭತೀರ್ಥ, ನರಹರಿತೀರ್ಥ, ತ್ರಿವಿಕ್ರಮ ಪಂಡಿತಾಚಾರ್ಯ ಮೊದಲಾದವರು ಆಚಾರ್ಯರ ಗ್ರಂಥಗಳಿಗೆ ವ್ಯಾಖ್ಯಾನ ಬರೆದಿದ್ದಾರೆ. ಜಯತೀರ್ಥರೆಂಬವರು ಅವರ ಹೆಚ್ಚಿನ ಕೃತಿಗಳಿಗೆಲ್ಲಾ ವ್ಯಾಖ್ಯಾನ ಬರೆದಿದ್ದಾರೆ. ಜಯ ತೀರ್ಥರು ಮಧ್ವರ "ಅನುವ್ಯಾಖ್ಯಾನ"ದ ಮೇಲೆ ಬರೆದ ವ್ಯಾಖ್ಯಾನ "ನ್ಯಾಯಸುಧಾ" ಸರ್ವೋತ್ಕೃಷ್ಟವೆನಿಸಿದೆ.

ತಮ್ಮೆಲ್ಲಾ ಮಹಾಕಾರ್ಯಗಳನ್ನು ನೆರವೇರಿಸಿದ ಮಧ್ವರು ತಮ್ಮ ಎಪ್ಪತ್ತೊಂಬತ್ತನೆಯ ವರ್ಷದಲ್ಲಿ ಪಿಂಗಳ ಸಂವತ್ಸರದ ಮಾಘಶುದ್ಧ ಒಂಬತ್ತರಂದು ಅಂದರೆ ಕ್ರಿ ಶ 1317 ರಲ್ಲಿ ದೈವಾಧೀನರಾದರು.

ಮಧ್ವಾಚಾರ್ಯರ ಕೃತಿಗಳು — ಅವುಗಳನ್ನು ಸ್ಥೂಲವಾಗಿ ಹೀಗೆ ವಿಂಗಡಿಸಬಹುದು.

1. ದಶಪ್ರಕರಣಗಳು, 2 ಉಪನಿಷತ್ತುಗಳ ವ್ಯಾಖ್ಯಾನಗಳು, 3 ಗೀತೆ ಮತ್ತು ಬ್ರಹ್ಮಸೂತ್ರಗಳ ಮೇಲೆ ವ್ಯಾಖ್ಯಾನ, 4. ಋಗ್ವೇದದ ಮೊದಲ ನಲವತ್ತು ಸೂಕ್ತಗಳಿಗೆ ವ್ಯಾಖ್ಯಾನ, 5. ಪದ್ಯರೂಪದಲ್ಲಿ ಮಹಾಭಾರತದ ಸಂಗ್ರಹ, 6. ಭಾಗವತದ ಮೇಲೆ ಸಂಕ್ಷಿಪ್ತ ಟಿಪ್ಪಣಿ, 7. ಇತರ ಕೆಲವು ಸ್ತೋತ್ರಗಳು, ಪದ್ಯಗಳು—ಇತ್ಯಾದಿ. ಬ್ರಹ್ಮಸೂತ್ರಗಳ ವಿಮರ್ಶಾತ್ಮಕ ಅಧ್ಯಯನವೆನಿಸಿದ 'ಅನುವ್ಯಾಖ್ಯಾನ' ಎಂಬ ಅವರ ಗ್ರಂಥ ಅತ್ಯಂತ ಪ್ರಮುಖವಾದುದು. ಇದಕ್ಕೆ ಜಯತೀರ್ಥರು ಬರೆದ 'ನ್ಯಾಯಸುಧಾ' ವ್ಯಾಖ್ಯಾನವೂ ಪ್ರಸಿದ್ಧವಾಗಿದೆ.

ಇತ್ತೀಚೆಗೆ ಸಂಶೋಧಿಸಿ ಪಡೆದಿರುವ 'ನ್ಯಾಸ ಪದ್ಧತಿ' ಮತ್ತು 'ತಿಥಿನಿರ್ಣಯ'ಗಳೂ ಸೇರಿದರೆ ಮಧ್ವರ ಕೃತಿಗಳ ಸಂಖ್ಯೆಯು ಒಟ್ಟು ನಲವತ್ತು.

ಮಧ್ವಾಚಾರ್ಯರ ತತ್ತ್ವಜ್ಞಾನ — ಮಧ್ವರ ಸಿದ್ಧಾಂತವು 'ದ್ವೈತವಾದ' ವೆಂದೇ ಪ್ರಸಿದ್ಧವಾಗಿದ್ದರೂ ಇದಕ್ಕೆ ಮೊದಲಲ್ಲಿ 'ತತ್ತ್ವವಾದ'ವೆಂದೇ ಹೆಸರಿತ್ತು. ಆಲೂರು ವೆಂಕಟರಾಯರ ಅಭಿಪ್ರಾಯದಂತೆ ಶಂಕರಾಚಾರ್ಯರ ಅನುಯಾಯಿಗಳು ತಾವು ಅದ್ವೈತಿಗಳಾದುದರಿಂದ ಅವರೇ ಇದನ್ನು "ದ್ವೈತ"ವೆಂದು ಕರೆದಿರಬೇಕು. ವೆಂಕಟರಾಯರು ಮಧ್ವರ ಸಿದ್ಧಾಂತಕ್ಕೆ 'ಪೂರ್ಣಬ್ರಹ್ಮವಾದ' ಎಂಬ ಹೆಸರನ್ನು ತಾವೇ ಸೂಚಿಸಿರುವುದು ಗಮನಾರ್ಹವಾಗಿದೆ. ಮಧ್ವರು ಪ್ರಪಂಚದ ತತ್ತ್ವಗಳನ್ನು ಸ್ವತಂತ್ರ ಅಸ್ವತಂತ್ರ ಎಂದು ಎರಡಾಗಿ ವಿಂಗಡಿಸಿರುವುದರಿಂದ ಅವರ ಸಿದ್ಧಾಂತಕ್ಕೆ 'ದ್ವೈತ' ಎಂಬ ಹೆಸರು ಬಂದಿರಬಹುದೆಂದು ಶ್ರೀ ವಿಶ್ವೇಶತೀರ್ಥ ಶ್ರೀಪಾದರು ತಮ್ಮ ತತ್ತ್ವಾಂಜಲಿ ಎಂಬ ಗ್ರಂಥದಲ್ಲಿ ಊಹಿಸಿದ್ದಾರೆ.

ಆಚಾರ್ಯ ಮಧ್ವರ ಮತದಂತೆ ನಾರಾಯಣನೇ ಸರ್ವೋತ್ತಮನು ಸರ್ವಗುಣಪರಿಪೂರ್ಣನು, ದೋಷವಿದೂರನು. ಸಜೀವ ನಿರ್ಜೀವಮಯವಾದ ಪ್ರಪಂಚವು ಅವನಿಂದ ಭಿನ್ನವೂ ಸತ್ಯವೂ ಆಗಿದ್ದು ಅವನನ್ನೇ ಅವಲಂಬಿಸಿದೆ. ಪ್ರಪಂಚದ ಎಲ್ಲಾ ಚಟುವಟಿಕೆಗಳೂ ಅವನ ಪ್ರೇರಣೆಯಿಂದಾಗುತ್ತದೆ. ಅವನು ಸರ್ವತಂತ್ರ ಸ್ವತಂತ್ರನು. ಲಕ್ಷ್ಮೀದೇವಿಯಿಂದ ಆರಂಭಿಸಿ ಎಲ್ಲಾ ದೇವತೆಗಳಿಗೂ ಜೀವರಿಗೂ ಭಿನ್ನಭಿನ್ನ ಸ್ವರೂಪ ಭೂತ ವ್ಯಕ್ತಿತ್ವಗಳು ಇದ್ದು ಅವರಲ್ಲಿ ತಾರತಮ್ಯವೂ ಇದೆ. ಮುಕ್ತಿಯಲ್ಲೂ ಈ ಭಿನ್ನ ವ್ಯಕ್ತಿತ್ವಗಳು ಹೋಗಲಾರವು. ಮುಕ್ತಿಯೆಂದರೆ, ಸುಜೀವರು ಪರಮಾತ್ಮನ ದರ್ಶನ ಹಾಗೂ ಪ್ರಸಾದದಿಂದ ತಮ್ಮ ಸ್ವರೂಪದಲ್ಲೇ ಜ್ಞಾನಾನಂದಾದಿ ಚಿದಾತ್ಮಕ ಸದ್ಗುಣಗಳನ್ನು ಅನುಭವಿಸುವುದು. ಸುಜೀವನು ಭಗವತ್ ಸಾಕ್ಷಾತ್ಕಾರದಿಂದ ತನ್ನದಲ್ಲದ ಅನ್ಯರೂಪದಿಂದ ಬಿಡುಗಡೆ ಹೊಂದಿ ತನ್ನ ನಿಜರೂಪವನ್ನು ತನ್ನ ಜ್ಞಾನಾನಂದಮಯ ಸುಂದರ ವ್ಯಕ್ತಿತ್ವವನ್ನು—ತನ್ನತನವನ್ನು ಪಡೆಯುತ್ತಾನೆ.

ಆಚಾರ್ಯರು ಮಾಯಾವಾದವನ್ನು ಖಂಡಿಸಿ ಪ್ರಪಂಚವು ಸತ್ಯವೆಂದು ಪ್ರತಿಪಾದಿಸಿ ಐಹಿಕ ಜೀವನವನ್ನು ಎತ್ತಿಹಿಡಿದು ಅದನ್ನು ಪರಿಶುದ್ಧಗೊಳಿಸಲು ಮಾರ್ಗದರ್ಶನ ನೀಡಿದ್ದಾರೆ ಎಲ್ಲಾ ದರ್ಶನ ತತ್ತ್ವಗಳನ್ನು ಚರ್ಚಿಸಿ, ಖಂಡಿಸಿ ತಮ್ಮ ಹೊಸಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ.

ಮಧ್ವಾಚಾರ್ಯರ ವ್ಯಕ್ತಿತ್ವ — ಮಧ್ವಾಚಾರ್ಯರು ಬಹುಮುಖ ವ್ಯಕ್ತಿತ್ವದ ಮಹಾಮಾನವ. ಅವರ ದೈಹಿಕ ಬೌದ್ಧಿಕ ಸಾಮರ್ಥ್ಯ ಅದ್ಭುತವಾದವೆಂಬುದು ಮಧ್ವವಿಜಯದಿಂದ ತಿಳಿಯುತ್ತದೆ. ಅವರ ಪವಾಡ, ಸಾಧನೆ ಸಿದ್ಧಿಗಳನ್ನು ತೋರುವ ಹಲವಾರು ಕಥೆಗಳು ಮಧ್ವವಿಜಯದಲ್ಲಿ ಉಲ್ಲೇಖಿತವಾಗಿವೆ ಎಪ್ಪತ್ತೊಂಬತ್ತು ವರ್ಷಗಳ ತುಂಬು ಆಯುಷ್ಯದ ಆರೋಗ್ಯ ಜೀವನವನ್ನು ಅವರು ಬಾಳಿದರು. ಅವರು ದೈಹಿಕ, ಬೌದ್ಧಿಕ, ನೈತಿಕ, ಸಾಂಸ್ಕೃತಿಕ ತತ್ತ್ವಗಳಲ್ಲಿ ನಂಬಿಕೆ ಇರಿಸಿದವರು. ಅವರು ದೇಹಶಕ್ತಿಯನ್ನು ಪ್ರಕಟಿಸಿದ ಹಲವಾರು ನಿದರ್ಶನಗಳು ಮಧ್ವವಿಜಯದಲ್ಲಿ ವರ್ಣಿತವಾಗಿವೆ. ಅವರ ಸಂಗೀತಾಭಿರುಚಿಯು ಗಮನಾರ್ಹವಾದುದು. ಅವರಿಂದಲೇ ದಾಸ ಪಂಥದ ಪ್ರೇರಣೆಯುಂಟಾಯಿತೆಂದು ನಂಬಲಾಗಿದೆ ತಾವೇ ಹೇಳಿಕೊಂಡಂತೆ ಅವರು ಪರಮಾತ್ಮನ ಅಂತರ್ಗತವನ್ನು ಮಾನವರಿಗೆ ತಿಳುಹಲು ಅವತರಿಸಿರುವ 'ಪ್ರವಾದಿ'. ಅವರು ವಾಯುದೇವರ ಮೂರನೆಯ ಅವತಾರವೆಂದೂ ಈ ಹಿಂದೆ ಹನುಮಾನ್ ಮತ್ತು ಭೀಮರ ಅವತಾರವನ್ನು ತಾಳಿದವರೆಂದೂ ನಂಬಲಾಗಿದೆ. ಭಾರತದ ಪ್ರಮುಖ ತತ್ತ್ವಜ್ಞಾನಿಗಳಲ್ಲಿ ಒಬ್ಬರು ಮಾತ್ರವಲ್ಲ ದಕ್ಷಿಣದ ಮೂವರಲ್ಲಿ ಮೂರನೆಯವರು. ದೇಶಾದ್ಯಂತ ಕಾಲ್ನಡಿಗೆಯಲ್ಲಿ ಸಂಚರಿಸಿ ವಿದ್ವತ್ತಿನ ದಿಗ್ವಿಜಯ ಮಾಡಿದವರು. ದೇಶದುದ್ದಗಲಕ್ಕೂ ನಾನಾಭಾಷೆಯ, ಪ್ರದೇಶದ ಜನ ಅವರ ಶಿಷ್ಯರಾಗಿದ್ದಾರೆ. ಹಲವರು ಅವರಿಂದ ಸ್ಫೂರ್ತಿ ಪಡೆದು ಸನ್ಯಾಸವನ್ನೂ ಸ್ವೀಕರಿಸಿದರು. ದೇಶದ ರಾಜಕೀಯ ಧಾರ್ಮಿಕ ಅಶಾಂತ ಪರಿಸ್ಥಿತಿಯಲ್ಲಿ ಜನರಿಗೆ ನೈತಿಕ ಬೆಂಬಲವಾಗಿ ನಿಂತು ಅವರನ್ನು ಬಡಿದೆಬ್ಬಿಸಿದರು. ಅವರು ಪರ್ಶಿಯನ್ ಭಾಷೆ (ಉರ್ದು)ಯನ್ನೂ ಬಲ್ಲರೆಂದು ಮಧ್ವವಿಜಯದಲ್ಲಿ ಉಲ್ಲೇಖಿಸಲಾಗಿದೆ. ಮಠ ದೇವಸ್ಥಾನಗಳ ಸ್ಥಾಪನೆ, ಜ್ಞಾನಬೋಧೆ, ಗ್ರಂಥರಚನೆ, ವಿದ್ವದ್ಗೋಷ್ಠಿ ವಾಕ್ಯಾರ್ಥವಾದ ಇತ್ಯಾದಿಗಳಿಂದ ಸದಾ ಕಾರ್ಯಪ್ರವೃತ್ತವಾಗಿದ್ದ ಮಹಾಚೇತನ ಅವರದು.

ಮಧ್ವಾಚಾರ್ಯರು ಮಹಾವಿದ್ವಾಂಸ, ಸಂತ, ತತ್ತ್ವಜ್ಞಾನಿ, ಅದ್ವಿತೀಯ ವ್ಯಕ್ತಿ ತಮ್ಮ ಗುರುವನ್ನೇ ವಾದದಲ್ಲಿ ಗೆದ್ದು ತನ್ನ ಕಡೆಗೆ ತಿರುಗಿಸಿದ ಬುದ್ಧಿವಂತ ಗುರುವು ಅವರಿಗಿತ್ತ 'ಆನಂದತೀರ್ಥ' ಎಂಬ ಹೆಸರು ತಾವೇ ಇರಿಸಿಕೊಂಡ ಮಧ್ವ (ಆನಂದಜ್ಞಾನ ಸ್ವರೂಪಿ) ಎಂಬ ಹೆಸರು ಅವರ ಬ್ರಹ್ಮಜ್ಞಾನದಿಂದ ಸಾರ್ಥಕವಾಗಿವೆ. ಕಡಲ ತಡಿಯ ಉಡುಪಿಯಲ್ಲಿ ಬೆಳೆದ ಕಲ್ಪವೃಕ್ಷ, ಪಾಜಕದಲ್ಲಿ ಉದಿಸಿದ ಈ ಪರಿವ್ರಾಜಕ; ಪಾರೆಯಲ್ಲಿ ಅರಳಿದ ಹೂ.



(8 ನೇ ಪುಟದಿಂದ)

ಚತುರ್ಮುಖ ಬ್ರಹ್ಮ, ಗರುಡ, ಶೇಷ, ರುದ್ರರು, ಮತ್ತು ಅವರ ಪತ್ನಿಯರು ಅಹಂಕಾರ ಶೂನ್ಯರಾದುದರಿಂದ ಇಂದ್ರಾದಿ ದೇವತೆಗಳಿಗಿಂತ ಉತ್ತಮರು. ಇಂದ್ರನು ಪರಮಾತ್ಮನ ಸ್ವರೂಪವನ್ನು ಪ್ರಥಮ ವಾಗಿ ಉಮಾದೇವಿಯಿಂದ ತಿಳಿದವನಾದ್ದ ರಿಂದ ಅಗ್ನ್ಯಾದಿದೇವತೆಗಳಿಗಿಂತ ಉತ್ತ ಮನು. ಅಥವಾ ಯಕ್ಷರೂಪಿ ಪರಮಾತ್ಮ ನನ್ನು ಮೊದಲು ಕಂಡಿದ್ದರಿಂದ ಅಗ್ನಿ ಮತ್ತು ವಾಯು ತಮಗಿಂತ ಕೆಳಗಿನ ದೇವ ಗಳಿಗಿಂತ ಉತ್ತಮರು. ಹೀಗೆ ಅಗ್ನಿಯಿಂದ ಚತುರ್ಮುಖ ಬ್ರಹ್ಮನ ವರೆಗೆ ಒಬ್ಬರಿಂದ ಇನ್ನೊಬ್ಬರು ಒಂದ-ನೂರು ಗುಣಗಳಿಂದ ಉತ್ತಮರಾಗಿರುವರೆಂದೂ, ತಾರತಮ್ಯ ಜ್ಞಾನವಿಲ್ಲದೇ ಮುಕ್ತಿಯು ದೊರಕುವು ದಿಲ್ಲವೆಂದೂ ಶ್ರೀಪೂರ್ಣಪ್ರಜ್ಞರ ಮಹಾ ಭಾರತ ತಾತ್ಪರ್ಯನಿರ್ಣಯದಲ್ಲಿ ತಿಳಿದು ಬರುವುದು "ಅಜಾನಜಾಃ ಕರ್ಮಜಾಶ್ಚ ದೇವಾ ಇಂದ್ರ, ಪುರಂದರ, ರುದ್ರ, ಸರ ಸ್ವತೀ ವಾಯುರ್ಮುಖಾತ್ ಶತಗುಣೋತ್ತರಾಃ (1-72) ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ। ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ ಕಥಂಚನ ॥ (1-81)

ಹೀಗೆ ಮೋಕ್ಷಕ್ಕೆ ಕಾರಣವಾದ ಪರಮಾತ್ಮನ ಮಹಿಮಾಜ್ಞಾನವನ್ನು ಒಬ್ಬ ಅಧಿ ಕಾರಿಯು ತಿಳಿದನಂತರ ಬ್ರಹ್ಮಜ್ಞಾನಕ್ಕೆ ಸ್ಥಾನ ಮತ್ತು ಉತ್ಪತ್ತಿಗಳನ್ನು ತಿಳಿಯು ವದೂ ಅವಶ್ಯ – "ತಸ್ಯೈ ತಪೋ ದಮಃ ಕರ್ಮೇತಿ ಪ್ರತಿಷ್ಠಾ। ವೇದಾಃ ಸರ್ವಾಂಗಾನಿ ಸತ್ಯಮಾಯತನಮ್। ಯೋ ಹ ವಾ ಏತಾಮು ಪನಿಷದಂ ವೇದಾಪಹತ್ಯ ಪಾಪ್ಮಾನ ಮನಂತೇ ಸ್ವರ್ಗೇ ಲೋಕೇ ಜ್ಯೇಯೇ ಪ್ರತಿತಿಷ್ಠತಿ ಜ್ಯೇಯೇ ಪ್ರತಿತಿಷ್ಠತಿ ॥ ಯಾವ ಅಧಿಕಾರಿಯು ಪರಮಾತ್ಮನನ್ನು ತದ್ವನ ವೆಂದು ಉಪಾಸಿಸುವನೋ, ಅವನು ಕೃಚ್ಛ ಚಾಂದ್ರಾಯಣಾದಿ ವ್ರತ ಅಥವಾ ಶಾಸ್ತ್ರ ಗಳ ಆಲೋಚನೆ. ಇಂದ್ರಿಯ ನಿಗ್ರಹ, ವರ್ಣಾಶ್ರಮೋಚಿತವಾದ ಕರ್ಮಾನುಷ್ಠಾನ ಗಳು ಈ ಬ್ರಹ್ಮವಿದ್ಯೆಯಸ್ಥಾನಗಳೆಂದೂ; ವೇದ-ವೇದಾಂಗಗಳು ಉತ್ಪಾದಕಗಳೆಂದೂ ತಿಳಿಯ ಬೇಕು. ಹೀಗೆ ಸ್ಥಾನೋತ್ಪತ್ತಿಗ ಳಿಂದ ಸಹಿತವಾದ ಈ ಉಪನಿಷತ್ಪ್ರತಿಪಾದ್ಯ ನಾದ, ಅನಂತಗುಣ ಪರಿಪೂರ್ಣನಾದ ಶ್ರೀ ಮನ್ನಾರಾಯಣನ ಸ್ವರೂಪವನ್ನು ಯಾವ ಯಾವ ಅಧಿಕಾರಿ ತಿಳಿಯುವನೋ ಅವನು ಸಂಸಾರದಿಂದ ಮುಕ್ತಿಹೊಂದಿ ಶ್ರೀವಿಷ್ಣುವಿನ ಆಶ್ರಯದಲ್ಲಿ ಸ್ವಸ್ವರೂಪಾನಂದ ಭೋಗವನ್ನು ಮಾಡುವನು.

ಈ ಪ್ರಕಾರ ಈ ಉಪನಿಷತ್ತಿನಲ್ಲಿ ಪೂರ್ಣ ಪ್ರಜ್ಞದರ್ಶನದ ತತ್ತ್ವಗಳನ್ನು ಪ್ರತಿಪಾ ದಿಸುವ ವಾಕ್ಯಗಳು ಮಾಲೆ-ಮಾಲೆಯಾಗಿ ಹೆಣೆದುಕೊಂಡಿವೆ. ಯಾವ ಜಿಜ್ಞಾಸುವೂ ಆ ಮುತ್ತುಗಳ ಸರವನ್ನು ಧರಿಸುವಂತೆ ಪರಿಣಾಮಕಾರಿಯಾಗಿದೆಯೆಂದು ಹೇಳಿದರೆ ಏನೂ ಅತಿಶಯೋಕ್ತಿ ಯಾಗಲಿಕ್ಕಿಲ್ಲ.



ಪಾರ್ವೇಟಿ ಉತ್ಸವದಲ್ಲಿ ಸ್ವಾಮಿ ಆರಾಧನೆ

## ತಿರುಮಲೆಯಲ್ಲಿ ವೈಕುಂಠ ಏಕಾದಶಿ

ವೈಕುಂಠ ಏಕಾದಶಿಯಾದ ಪ್ರಯುಕ್ತ ಶನಿವಾರ ಒಂದು ಲಕ್ಷಕ್ಕೂ ಮೀರಿದ ಭಕ್ತರು ಸ್ವಾಮಿಯನ್ನು ದರ್ಶಿಸಿದರು.

ಸ್ವಾಮಿ ಗರ್ಭಗುಡಿಯ ಅತಿ ಹತ್ತಿರದ ಪ್ರದಕ್ಷಿಣಾ ಪಥವಾದ ವೈಕುಂಠ ದ್ವಾರವನ್ನು ವರ್ಷಕ್ಕೊಮ್ಮೆ ವೈಕುಂಠ ಏಕಾದಶಿಯಂದು ಮಾತ್ರ ತೆರೆದು ಭಕ್ತರಿಗೆ ಅದರಲ್ಲಿ ನಡೆದು ಪ್ರದಕ್ಷಿಣೆಗೆ ಅವಕಾಶ ಕಲ್ಪಿಸುವುದು ಸಂಪ್ರದಾಯವಾಗಿದ್ದು, ಅಂದು ಬೆಳಗ್ಗೆ ಮೂರುಗಂಟೆಯಿಂದಲೇ ಅದನ್ನು ತೆರೆದಿಡಲಾಗಿದ್ದಿತು.

## ತಿರುಮಲೆಯಲ್ಲಿ ಮುಖ್ಯಮಂತ್ರಿಗಳು

ರಾಜಾಸ್ಥಾನದ ಮುಖ್ಯಮಂತ್ರಿ ಶ್ರೀ ಹರದೇವ ಜೋಷಿ ಹಾಗೂ ಉತ್ತರ ಪ್ರದೇಶದ ಮುಖ್ಯಮಂತ್ರಿ ಶ್ರೀ ವೀರಬಹಾದುರ್ ಸಿಂಗ್ ಅವರುಗಳು ತಮ್ಮ ತಮ್ಮ ಕುಟುಂಬ ಸಮೇತರಾಗಿ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು. ಸ್ವಾಮಿ ದರ್ಶನಾನಂತರರ ಶ್ರೀ ಪದ್ಮಾವತೀ ಅತಿಥಿಗೃಹದಲ್ಲಿ ಇಬ್ಬರೂ ಪರಸ್ಪರ ಸಂಧಿಸಿ ಮಾರನೆಯದಿನ ಬೆಳಗ್ಗೆ ಬುಧವಾರ ಸ್ವಾಮಿಯ ತೋಮಾಲೆಸೇವೆ ಅರ್ಚನೆಗಳಲ್ಲಿ ಪಾಲುಗೊಂಡು ಸೇವೆ ಸಲ್ಲಿಸಿದರು. ಮಂಗಳವಾರ ರಾತ್ರಿ ದರ್ಶನದಲ್ಲಿ ಎಲ್ಲರಂತೆಯೇ ಇವರೂ ಇಪ್ಪತ್ತೈದು ರೂಗಳ ವಿಶೇಷ ಪ್ರವೇಶದ ಟಿಕೆಟ್ ಪಡೆದು ಒಳಗೆ ಬಂದರು. ಇವರ ಆತಿಥ್ಯದ ಏರ್ಪಾಡುಗಳನ್ನು ಶ್ರೀ ಆಂಜನೇಯುಲು ನಾಯುಡು ಅವರೂ, ದರ್ಶನದ ಏರ್ಪಾಡುಗಳನ್ನು ಆಲಯ ಅಧಿಕಾರಿ ಶ್ರೀ ಪೀರಯ್ಯ ಅವರೂ ನಿರ್ವಹಿಸಿದರು.

ಮುಖ್ಯಮಂತ್ರಿಗಳಿಬ್ಬರೂ ಸ್ವಾಮಿದರ್ಶನದ ನಂತರ ಆಲಯಾಧಿಕಾರಿಗಳೊಡನೆ ಮಾತ–ನಾಡುತ್ತ ಆಲಯದ ಶುಭ್ರತೆ, ಪ್ರಶಾಂತತೆಗಳನ್ನು ಮೆಚ್ಚಿಕೊಂಡರು.

## ಪಾರ್ವೇಟಿ ಉತ್ಸವ

ತಿರುಮಲೆಯಲ್ಲಿ ಮಕರ ಸಂಕ್ರಾಂತಿಯ ಪಾರ್ವೇಟಿ ಉತ್ಸವವು ಎಂದಿನಂತೆ ಘನವಾದ ವೈಭವದಿಂದ ಜನವರಿ 16 ನೇ ತಾರೀಖು ನಡೆಯಿತು. ದೇವರನ್ನು ಪಾಪನಾಶಿನಿ ರಸ್ತೆಯ ಪಾರ್ವೇಟಿ ಮಂಟಪಕ್ಕೆ ಮೆರವಣಿಗೆಯಲ್ಲಿ ಕರೆದೊಯ್ದು ಅರ್ಚಿಸಲಾಯಿತು. ಅಸಂಖ್ಯ ಭಕ್ತಜನರು ಮೆರವಣಿಗೆಯಲ್ಲಿ ಭಾಗವಹಿಸಿದ್ದರು.

ಪಾರ್ವೇಟಿ ಉತ್ಸವದ ಸಲುವಾಗಿ ಅಂದು ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಬ್ರಹ್ಮೋತ್ಸವ, ವಾಹನಸೇವೆಗಳು ಊಂಜಲ್ ಸೇವೆ ಮೊದಲಾದವು ನಡೆಯಲಿಲ್ಲ. (ಚಿತ್ರಗಳನ್ನು ಒಳ ರಕ್ಷಾಪತ್ರದಲ್ಲಿ ಕಾಣಬಹುದು)

## ತಿ. ತಿ. ದೇ. ಗಳಿಗೆ ಹೊಸ ಸಂರಕ್ಷಣಾಧಿಕಾರಿ

ತಿ ತಿ. ದೇ ಗಳ ಸಂರಕ್ಷಣಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಕೆ ಕೃಷ್ಣಮೂರ್ತಿಯವರನ್ನು ಅನಂತಪುರದ ಪೋಲೀಸು ತರಬೇತಿ ಕಾಲೇಜಿಗೆ ಪ್ರಾಂಶುಪಾಲರಾಗಿ ವರ್ಗಾವಣೆ ಮಾಡಿದ್ದು, ಅವರ ಸ್ಥಳದಲ್ಲಿ ಶ್ರೀ ಎಸ್ ಕೆ ಜಯಚಂದ್ರ ಅವರನ್ನು ಸಂರಕ್ಷಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಈ ಮೊದಲು ಪೋಲೀಸು ಸೂಪರಿಂ–ಟೆಂಡೆಂಟ್ ಆಗಿದ್ದ ಶ್ರೀ ಎಸ್. ಕೆ. ಜಯಚಂದ್ರ ಅವರು ತಿ. ತಿ. ದೇ. ಗಳಲ್ಲಿ ತಮ್ಮ ಪದವಿಯನ್ನು ಸ್ವೀಕರಿಸಿದ್ದಾರೆ.

## ಪುಸ್ತಕ ಬಿಡುಗಡೆ - ಅಷ್ಟಾವಧಾನ

ತಿರುಪತಿಯ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ಈಚೆಗೆ ಸ್ಥಳೀಯ ಫೈನ್ ಆರ್ಟ್ಸ್ ಅಕಾಡಮಿಯವರ ಆಶ್ರಯದಲ್ಲಿ ಪುಸ್ತಕ ಬಿಡುಗಡೆ-ಅಷ್ಟಾವಧಾನ ಕಾರ್ಯಕ್ರಮಗಳು ನಡೆದವು.

ತಿ. ತಿ. ದೇ. ಗಳ ಆರ್ಥಿಕ ನೆರವಿನಿಂದ ಪ್ರಕಟವಾದ ಶ್ರೀ ಎಂ. ಕೊಂಡಮಾಚಾರ್ಯ ಕೃತ 'ಅಮೃತಸಾರಮು' ಪುಸ್ತಕವನ್ನು ಬೋರ್ಡ್ ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯನವರು ಶ್ರೀ ಪದ್ಮಾವತೀ ಮಹಿಳಾ ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ॥ ಕೆ. ರಾಜ್ಯಲಕ್ಷ್ಮಿ ಅವರ ಅಧ್ಯಕ್ಷತೆಯಲ್ಲಿ ಬಿಡುಗಡೆಮಾಡಿದರು. 'ಶ್ರೀ ಅನ್ನಮಾಚಾರ್ಯರ ಕೀರ್ತನೆಗಳ ಸಾರವನ್ನು ಸೀಸ ಪದ್ಯಗಳಲ್ಲಿ ಘನವಾಗಿ ಪರಿವರ್ತಿಸಿದ್ದಾರೆ (ಶ್ರೀ ಮುದಿವರ್ತಿ ಕೊಂಡಮಾಚಾರ್ಯ) ಪ್ರಕೃತ ಕವಿ' ಎಂದು ಹೇಳುತ್ತ ಅಲ್ಲಲ್ಲಿ ರಸಘಟ್ಟಿಗಳನ್ನು ಓದಿ ಪರಿಚಯಿಸಿದರು ಡಾ॥ ಎಸ್. ಬಿ. ರಘುನಾಥಾಚಾರ್ಯರು ಕವಿ ಶ್ರೀ ಕೊಂಡಮಾಚಾರ್ಯರು ಮಾತನಾಡಿ ಈ ಪುಸ್ತಕ ಸ್ವಾಮಿಗೆ ಪ್ರಿಯವಾಗಲಿ ಎಂದು ಬೇಡಿದರು.

ನಂತರ ಅಷ್ಟಾವಧಾನ ಚಕ್ರವರ್ತಿ ಹೆಸರು ಪಡೆದ ಶ್ರೀ ಮೇಡಸಾನಿ ಮೋಹನ್ ಅವರ ಅಷ್ಟಾವಧಾನ ನಡೆಯಿತು ಸರ್ವಶ್ರೀ ಡಾ॥ ಎಸ್ ಬಿ ರಘುನಾಥಾಚಾರ್ಯ, ಕೆ. ವಿ. ರಾಮಕೃಷ್ಣಮಾಚಾರ್ಯ, ಪಿ ವಿ. ಶ್ರೀನಿವಾಸಮೂರ್ತಿ,

ಡಾ॥ ಕೆ. ಸರ್ವೋತ್ತಮರಾವ್, ಬಾಲಕೃಷ್ಣ ಪ್ರಸಾದ್, ವೈ. ಕೆ. ವಿ. ಎಸ್. ಆಚಾರ್ಯ, ಮುರಳೀ ಮೋಹನ್, ಶ್ರೀಮತಿ ಭಾಸ್ಕರ ಸ್ವರ್ಣಾಂಬ ಅವರುಗಳು ಪ್ರಚ್ಛಕರಾಗಿದ್ದರು.

ಅಕಾಡಮಿಯ ಪರವಾಗಿ ಶ್ರೀ ಡಿ. ಸೀತಾರಾಮಯ್ಯನವರು. ಅವಧಾನಿ ಶ್ರೀ ಮೋಹನ್ ಅವರನ್ನೂ ಪ್ರಚ್ಛಕರನ್ನೂ ಸನ್ಮಾನಿಸಿದರು.

## ಮಂಡ್ಯದಲ್ಲಿ ಪುರಂದರ ಆರಾಧನೆ

ತಿರುಮಲೆ ತಿರುಪತಿ ದೇವಸ್ಥಾನಗಳ ದಾಸ ಸಾಹಿತ್ಯ ಪ್ರಾಜೆಕ್ಟ್, ಮಂಡ್ಯದಲ್ಲಿ ಜನವರಿ 27 ರಿಂದ 31ರವರೆಗೆ ಪುರಂದರದಾಸರ ಆರಾಧನೆಯನ್ನೂ ದಾಸಸಾಹಿತ್ಯ ವಸ್ತು ಪ್ರದರ್ಶನವನ್ನೂ ಏರ್ಪಡಿಸಿದೆ.

ತತ್ಸಂಬಂಧದಲ್ಲಿ ಪ್ರಸನ್ನ ವೆಂಕಟದಾಸ ಕೃತ ಶ್ರೀನಿವಾಸನ ಹಾಡುಗಳ ತೆಲುಗು ವಿವರಣೆಯ ಶ್ರೀನಿವಾಸ ಸಂಕೀರ್ತನಲು, (ಅನುವಾದ–ವಿ. ಸೂರ್ಯನಾರಾಯಣರಾವ್) ಭಕ್ತ ಪುರಂದರ ದಾಸು (ನಾಟಕ–ತೆಲುಗು ಅನುವಾದ–ಸುದರ್ಶನ ಭಟ್ಟಾಚಾರ್ಯ.) ಭಕ್ತ ಪುರಂದರದಾಸರು (ಕನ್ನಡ – ಕೆ. ಅಪ್ಪಣ್ಣಾಚಾರ್ಯ) – ಪುಸ್ತಕಗಳನ್ನು ವ್ಯಾಸರಾಯರ ಮಠದ ಶ್ರೀ ಶ್ರೀ ವಿದ್ಯಾಪಯೋನಿಧಿ ತೀರ್ಥರು ಬಿಡುಗಡೆ ಮಾಡುವರೆಂದೂ, ವಸ್ತು ಪ್ರದರ್ಶನವನ್ನು ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆಯವರು ಉದ್ಘಾಟಿಸುವರೆಂದೂ ವರದಿಯಾಗಿದೆ

ಆರಾಧನೋತ್ಸವದಲ್ಲಿ ಖ್ಯಾತ ವಿದ್ವಾಂಸರಿಂದ ಉಪನ್ಯಾಸಗಳನ್ನೂ ಹರಿಕಥೆ ಸಂಗೀತ ಕಚೇರಿಗಳನ್ನೂ ಭಜನಾಗೋಷ್ಠಿಗಳನ್ನೂ ಏರ್ಪಡಿಸಲಾಗಿದೆ

## ಕುಮಾರವ್ಯಾಸ ಜಯಂತಿ

ಕನ್ನಡ ಭಾರತವೆಂದು ಹೆಸರಾದ ಕರ್ನಾಟಕ ಭಾರತ ಕಥಾಮಂಜರಿಯ ಕರ್ತೃ ಕವಿ ಕುಮಾರ ವ್ಯಾಸನ 500 ನೇ ಜಯಂತ್ಯುತ್ಸವವನ್ನು ಕುಮಾರವ್ಯಾಸ ಸೇವಾಸಂಘದವರು ಹುಬ್ಬಳ್ಳಿಯ ಜ್ಞಾನೋದಯ ಗ್ರಂಥ ಭಂಡಾರ ಭವನದಲ್ಲಿ ಸರಳವಾಗಿ ನಡೆಸಿದರೆಂದು ವರದಿಯಾಗಿದೆ.

ಅಧ್ಯಕ್ಷ ಪೀಠದಿಂದ ಕರ್ನಾಟಕ ವಿಶ್ವ ವಿದ್ಯಾಲಯದ ಸಂಸ್ಕೃತ ಪ್ರಾಚಾರ್ಯ ಶ್ರೀ ಮುಳಗಿ ಜಯತೀರ್ಥಾಚಾರ್ಯರು ಕವಿಯ ವಾಕ್ ಪ್ರೌಢಿಮೆಯನ್ನೂ ಪ್ರತಿಭಾವಿಶೇಷವನ್ನೂ ಕೊಂಡಾಡಿದರು.

ಬೆಂಗಳೂರಿನ ಗಮಕಿ ಶ್ರೀ ಎಂ. ಎ. ಜಯ ರಾಮು ಅವರು ಕುಮಾರವ್ಯಾಸನ ಕರ್ಣನ ಬಗ್ಗೆ ಉಪನ್ಯಾಸ ಮಾಡಿದರು. ಗಮಕಿ ಶ್ರೀ ಆರ್. ಎಸ್. ಕುಲಕರ್ಣಿ ಅವರು ಭಾರತದ ಭಾಗಗಳನ್ನು ವಾಚಿಸಿದರು.

ಬಿ. ಎ. ದೇಸಾಯಿ (ಸಂಘದ ಅಧ್ಯಕ್ಷರು) ಸ್ವಾಗತಿಸಿದ ಸಭೆಯನ್ನು ಶ್ರೀ ಕೆ. ಸುರೇಂದ್ರದಾನಿ (ಸಂಘದ ಕಾರ್ಯದರ್ಶಿ) ಅವರು ವಂದಿಸಿದರು.

## ಭಕ್ತಿಗೀತೆಗಳ ಕ್ಯಾಸೆಟ್‌ಗಳ ಬಿಡುಗಡೆ

ಕನ್ನಡ ಹಾಗೂ ತೆಲುಗಿನ ಭಕ್ತಿಗೀತೆಗಳ ಎಂಟು ಕ್ಯಾಸೆಟ್‌ಗಳನ್ನು ಜನವರಿ ತಿಂಗಳಿನಲ್ಲಿ ತಿರುಮಲೆಯಲ್ಲಿ ಬಿಡುಗಡೆ ಮಾಡಲಾಯಿತು.

ಕರ್ನಾಟಕ ಹರಿದಾಸರು ಶ್ರೀ ವೆಂಕಟೇಶ್ವರನನ್ನು ಕುರಿತು ಹಾಡಿದ ಆರು ಧ್ವನಿಸುರುಳಿಗಳು ಕನ್ನಡದ ಖ್ಯಾತ ಸಂಗೀತ ವಿದ್ವಾಂಸರುಗಳಿಂದ ಹಾಡಲ್ಪಟ್ಟಿದ್ದು, (ಶ್ರೀ ಆರ್. ಕೆ ಶ್ರೀಕಂಠನ್, ಶ್ರೀ ಸಂತ ಭದ್ರಗಿರಿ ಅಚ್ಯುತದಾಸಜಿ, ಶ್ರೀಮತಿಯರಾದ ವಾಣಿಜಯರಾವ್, ಸರೋಜ, ಲಲಿತ, ಬೆಳ್ಳೂರು ಸೋದರಿಯರು, ರತ್ನಮಾಲಾ ಪ್ರಕಾಶ್) ಅನ್ನಮಾಚಾರ್ಯರು ರಚಿಸಿದ ಕೃತಿಗಳನ್ನು ಎರಡು ಧ್ವನಿ ಸುರುಳಿಗಳಲ್ಲಿ ಶ್ರೀ ಡಿ. ಪಶುಪತಿಯವರು ಹಾಡಿದ್ದಾರೆ.

ಧ್ವನಿಸುರುಳಿಗಳನ್ನು ಬಿಡುಗಡೆ ಮಾಡುತ್ತ ತಿ. ತಿ. ದೇ. ಗಳ ಬೋರ್ಡ್ ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ ಅವರು ಧ್ವನಿ ಮುದ್ರಣ ಸುರುಳಿಗಳ ಮಾಧ್ಯಮವನ್ನು ಸನಾತನ ಧರ್ಮ ಪ್ರಸಾರದಲ್ಲಿ ಚೆನ್ನಾಗಿ ಬಳಸಬಹುದೆಂದು ವಿವರಿಸುತ್ತ ಭಕ್ತಿಗೀತೆಗಳ ಪ್ರಸಾರದಲ್ಲಿ ತಿ.ತಿ.ದೇ. ವ್ಯಾಪಕವಾಗಿ ಕೆಲಸ ಮಾಡುವ ಯೋಜನೆ ಹೊಂದಿಯೆಂದರು.



ಕ್ಯಾಸೆಟ್ ಬಿಡುಗಡೆಯಲ್ಲಿ ಬೋರ್ಡ್ ಅಧ್ಯಕ್ಷರು ಶ್ರೀ ದೇವಿನೇನಿ ಸೀತಾರಾಮಯ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಶ್ರೀ ಕೆ. ಕೃಷ್ಣಮೂರ್ತಿ ಹಾಗೂ ಶ್ರೀ ಕೆ. ಅಪ್ಪಣ್ಣಾಚಾರ್ಯ ಮತ್ತಿತರರು.

ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಮಾತನಾಡುತ್ತ ಭಕ್ತಿಗೀತಾಧ್ವನಿಸುರುಳಿಗಳನ್ನು ಹಂತ ಹಂತವಾಗಿ ಬಿಡುಗಡೆ ಮಾಡಲಾಗುವುದೆಂದೂ ವಿವರಿಸುತ್ತ, ಈ ದಿಸೆಯಲ್ಲಿ ಶ್ಲಾಘನೀಯ ಸೇವೆಯನ್ನು ಸಲ್ಲಿಸಿದ ಶ್ರೀ ಕೆ ಕೃಷ್ಣಮೂರ್ತಿ ಅವರ ಕರ್ತವ್ಯ ಪರತೆಯನ್ನು ಕೊಂಡಾಡಿದರು

ಕನ್ನಡದ ಧ್ವನಿಸುರುಳಿಗಳು ದಾಸಸಾಹಿತ್ಯ ಪ್ರಾಜೆಕ್ಟ್‌ನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರ ಹಿರಿತನದಲ್ಲೂ ತೆಲುಗು ಧ್ವನಿಸುರುಳಿಗಳು ಎಸ್. ವಿ. ಸಂಗೀತ ನೃತ್ಯ ಕಳಾಶಾಲೆಯ ಪ್ರಾಂಶುಪಾಲ ಶ್ರೀ ಡಿ. ಪಶುಪತಿಯವರ ಹಿರಿತನದಲ್ಲೂ ತಯಾರಾಗಿವೆ.



ಕ್ಯಾಸೆಟ್ ಬಿಡುಗಡೆ

ಮುಂದಿನ ಸಂಚಿಕೆಯಲ್ಲಿ .... ....

ಸಪ್ತಗಿರಿ. — ಮಾರ್ಚ್ 1987

ಶ್ರೀ ರಾಮಕೃಷ್ಣ ಪರಮಹಂಸರು — ವ ತಿ ರಾಮಕೃಷ್ಣಯ್ಯ

ನಾಥದ್ವಾರ — ಆದ್ಯರಾಮಾಚಾರ್ಯ

ವಾದಿರಾಜರ ವೆಂಕಟಾಚಲ ಯಾತ್ರೆ — ವಾಣಿ ವಿ ಕುಲಕರ್ಣಿ

ಆಂಧ್ರಕವಿಪುಂಗವ ಪೋತನ — ವಿದ್ವಾನ್ ಬ.ನ. ಗುಂಡೂರಾವ್

ಯುಗಾದಿ ಸಂಭ್ರಮ — ಸ.ವಿ ತ್ರಾ ಶಾನಭಾಗ

ಹೊಸ ಆಕರ್ಷಣೆ: ಗೋದಾದೇವೀ ಕೃತ ತಿರುಪ್ಪಾವೈನ ಸಚಿತ್ರ ವಿವರಣೆ.

ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.

ನಿಮ್ಮ ಪ್ರತಿಯನ್ನು ಕಾಯ್ದಿರಿಸಿ. ಬೆಲೆ: ರೂ. 1-00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12-00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ಸಂಪಾದಕರು

ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಮಾರ್ಚ್ 1987

| | | |
|---|---|---|
| 1. | ಭಾನುವಾರ | ಶ್ರೀರಾಮಕೃಷ್ಣ ಜನ್ಮದಿನ |
| 8 | ಭಾನುವಾರ | ತಿರುಕಚ್ಚಿನಂಬಿ ಶಾತ್ತುಮೊರೆ |
| 10. | ಮಂಗಳವಾರ | ಕುಲಶೇಖರ ಆಳ್ವಾರ್ ವರ್ಷ ತಿರುನಕ್ಷತ್ರ. |
| 11. | ಬುಧವಾರ | ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಭ. |
| 15 | ಭಾನುವಾರ | ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ ತುಂಬುರುತೀರ್ಥ ಮುಕ್ಕೋಟಿ. ಶ್ರೀ ಚೈತನ್ಯ ಜನ್ಮದಿನ, ಕಾಮದಹನ |
| 18 | ಬುಧವಾರ | ಶ್ರೀ ವಾದಿರಾಜರ ಪುಣ್ಯದಿನ. |
| 26. | ಗುರುವಾರ | ನಾಗಲಾಪುರಂ ಶ್ರೀ ವೇದನಾರಾಯಣಸ್ವಾಮಿ ತೆಪ್ಪೋತ್ಸವಾರಂಭ. |
| 27. | ಶುಕ್ರವಾರ | ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವಾರಂಭ. |
| 28. | ಶನಿವಾರ | ನಾಗಲಾಪುರಂ ಶ್ರೀ ವೇದನಾರಾಯಣಸ್ವಾಮಿ ತೆಪ್ಪೋತ್ಸವ ಸಮಾಪ್ತಿ |
| 30. | ಸೋಮವಾರ | ಚಾಂದ್ರಮಾನಯುಗಾದಿ. |
| 31. | ಮಂಗಳವಾರ | ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವದಲ್ಲಿ ಗರುಡೋತ್ಸವ. |

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು. ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

Edited and Published on behalf of the T T Devasthanams by K. Subba Rao, M A, and Printed at

